ಸಂಪುಟ ೧೮ರ ಸಂಚಿಕೆ ೪ ಡಿಸೆಂಬರ್ ೧೯೯೭

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂ. ೧೮ ಸಂ. ೪ ಡಿಸೆಂಬರ್ ೧೯೯೭

# ಸುಧಾರಣೆ: ಮೊದಲ ಮಜಲು

**1992-1997 :**

ಈ ಆರು ವರ್ಷಗಳಲ್ಲಿ ದೇಶದ ನದಿಗಳಲ್ಲಿ ಎಷ್ಟೋ ನೀರು ಹರಿದುಹೋಗಿದೆ. ನಮ್ಮ ಅರ್ಥವ್ಯವಸ್ಥೆಯಲ್ಲಿ ಸಾಗರಿಕ ಬದಲಾವಣೆಗಳೇ ಸಂಭವಿಸಿವೆ. ಕೇಂದ್ರದ ನಿಯಂತ್ರಣ ಮತ್ತು ನಿರ್ದೇಶನಗಳಿಗೆ ಒಳಪಟ್ಟಿದ್ದ ಅರ್ಥವ್ಯವಸ್ಥೆ ಈಗ ಮುಕ್ತಮಾರುಕಟ್ಟೆಯ ಚಲನವಲನಗಳಿಗೆ ಅನುಗುಣವಾಗಿ ಸ್ಪಂದಿಸುವಂತಾಗಿದೆ. ಸರ್ಕಾರಿ ಉದ್ಯಮವಲಯದ ಪ್ರಾಶಸ್ತ್ಯ ಕಡಿಮೆಯಾಗಿದೆ. ಸರ್ಕಾರಿ ಎಂದರೆ ಅದಕ್ಷ, ಭ್ರಷ್ಟಾಚಾರಪೂರಿತ, ದುಬಾರಿ, ಅನುಭೋಗಿಹಿತದೂರ—ಎಂಬೆಲ್ಲ ಭಾವನೆಗಳು ಅನೇಕರಲ್ಲಿ ಮೂಡಿವೆ. ಅತ್ಯಂತ ಚಾಂಚಲ್ಯದಿಂದ ಕೂಡಿದ ಆರ್ಥಿಕ ಚಟುವಟಿಕೆಗಳನ್ನು ನಿರ್ವಹಿಸಲು ತಕ್ಕ ವ್ಯವಸ್ಥೆಯಾಗಲಿ, ಯೋಗ್ಯತೆಯಾಗಲಿ ಸರ್ಕಾರಕ್ಕಿಲ್ಲ; ಆದ್ದರಿಂದ ಸರ್ಕಾರ ಇದನ್ನು ಬಿಟ್ಟುಕೊಡಲಿ, ಮಾರುಕಟ್ಟೆಗೆ ಸ್ನೇಹಿಯಾಗಿ ವರ್ತಿಸಲಿ ; ಆರ್ಥಿಕ ಚಟುವಟಿಕೆಗಳು ವಿಶ್ವಕ್ಕೆ ಮುಖಮಾಡಿಕೊಳ್ಳಲಿ. ವಿಶ್ವವ್ಯಾಪಿ ಅರ್ಥವ್ಯವಸ್ಥೆ, ಮಾರುಕಟ್ಟೆಯ ಭೂಮಂಡಲೀಕರಣ ಇದು ಇಂದಿನ ಐಹಿಕ ದರ್ಶನ—ಎಂಬ ವಾದವೀಗ ಮುಂದಾಗಿದೆ. ಖಾಸಗಿ ಉದ್ಯಮ ವಲಯವೇ ಹೆಚ್ಚು ದಕ್ಷ, ಸಹಜ ; ಆದರಿಂದಲೇ ಉದ್ಧಾರ ಸಾಧ್ಯ ; ಸ್ಪರ್ಧೆಯ ವಾತಾವರಣದಿಂದಲೇ ಸಕಲರ ಕಲ್ಯಾಣ ಎಂಬ ಭಾವನೆ ಬೆಳೆದಿದೆ.

ಈ ಬದಲಾದ ನಿಲುವಿಗೆ ಅನುಗುಣವಾಗಿ ಬ್ಯಾಂಕಿಂಗ್ ವಲಯದಲ್ಲೂ ಅನೇಕ ಬದಲಾವಣೆಗಳಾಗಿವೆ. ದೇಶದಲ್ಲಿ ಹೊಸ ಆರ್ಥಿಕ ನೀತಿ—ಆರ್ಥಿಕ ಉದಾರೀಕರಣದ ನೀತಿ—ಜಾರಿಗೆ ಬಂದಾಗ (1991) ಬ್ಯಾಂಕಿಂಗ್ ವಲಯದಲ್ಲೂ ಮೂಲಭೂತ ಸುಧಾರಣೆ ಅಗತ್ಯವೆನಿಸಿತ್ತು. ಈ ಬಗ್ಗೆ ಪರಿಶೀಲನೆ ನಡೆಸಿ ಶಿಫಾರಸುಗಳನ್ನು ನೀಡಲು ಎಂ. ನರಸಿಂಹಂ ಅವರ ನೇತೃತ್ವದಲ್ಲಿ ಒಂದು ಸಮಿತಿಯ ನೇಮಕವಾಯಿತು. ಆ ಸಮಿತಿಯ ಸಲಹೆಗಳ ಪೈಕಿ ಹಲವನ್ನು ಕಳೆದ ಆರು ವರ್ಷಗಳಲ್ಲಿ ಜಾರಿಗೆ ತರಲಾಗಿದೆ. ನರಸಿಂಹಂ ಸಮಿತಿ ಸೂಚಿಸದೆ ಇದ್ದಂಥ ಹಲವು ಬೆಳವಣಿಗೆಗಳು ಕೂಡ ಆಗಿವೆ. ನರಸಿಂಹಂ ಸಮಿತಿಯ ಶಿಫಾರಸುಗಳಲ್ಲಿ ಸರ್ಕಾರ ಕೆಲವನ್ನು ಆರಿಸಿಕೊಂಡು, ಇನ್ನು ಕೆಲವನ್ನು ಮಾರ್ಪಡಿಸಿ ಜಾರಿಗೊಳಿಸಿದೆ. ಸಮಿತಿಯ ಆಶಯಕ್ಕೇ ಭಂಗ ಬರುವ ರೀತಿಯ ಬೆಳವಣಿಗೆಗಳೂ ಆಗಿವೆ. ಇತ್ತ ಮುಕ್ತ ವ್ಯವಸ್ಥೆಯೂ ಅಲ್ಲ, ಅತ್ತ ಕೇಂದ್ರದ ನಿಯಂತ್ರಣಕ್ಕೆ ಒಳಪಟ್ಟೂ ಇಲ್ಲ ಎಂಬ ಇಬ್ಬಂದಿಯ ಸ್ಥಿತಿ ಉಂಟಾಗಿದೆ. ಬದಲಾವಣೆಯೇನೋ ಆಗಬೇಕು. ಯಾವ ವ್ಯವಸ್ಥೆಯೇ ಆಗಲಿ, ನಿಂತ ನೀರಾದರೆ ಕೊಳೆಯುತ್ತದೆ. ಆದ್ದರಿಂದ ಬದಲಾವಣೆ ಅಗತ್ಯ. ಆದರೆ ಬಯಸಿದ್ದು ಏನು ? ಆಗಿರುವುದು ಏನು ? ನಾವು ಎಲ್ಲಿಗೆ ಬಂದಿದ್ದೇವೆ ? ಎತ್ತ ಸಾಗಿದ್ದೇವೆ ? ಈ ಬಗ್ಗೆ ನಮಗೆ ನಾವೇ ಪ್ರಶ್ನಿಸಿಕೊಳ್ಳುವ ಕಾಲ ಬಂದಿದೆ.

### ಬ್ಯಾಂಕ್ ರಾಷ್ಟ್ರೀಕರಣ

ಆಯೋಜಿತ ಹಾಗೂ ನಿಯಂತ್ರಿತ ಅರ್ಥವ್ಯವಸ್ಥೆಯಲ್ಲಿ ಸಾರ್ವಜನಿಕ ವಲಯವೇ ಸಿಂಹಾಸನವನ್ನೇರಿ ಮೆರೆಯಬೇಕು ಎಂಬ ದರ್ಶನಕ್ಕೆ ಅನುಗುಣವಾಗಿ ರಾಷ್ಟ್ರೀಕರಣಗೊಂಡ ಪ್ರಧಾನ ಬ್ಯಾಂಕುಗಳು ಸಾರ್ವಜನಿಕ ವಲಯ ಸಂಸ್ಥೆಗಳೆನಿಸಿಕೊಂಡಿದ್ದುವು. ಗ್ರಾಮಗ್ರಾಮಕ್ಕೂ ಬ್ಯಾಂಕಿಂಗ್ ಸೇವೆ ವಿಸ್ತರಿಸಬೇಕೆಂಬ ಗುರಿಯನ್ನು ಇರಿಸಿಕೊಳ್ಳಲಾಗಿತ್ತು. ದೇಶದ ವಿರಳ ಸಂಪನ್ಮೂಲಗಳನ್ನು ಬಳಸಿಕೊಂಡು ಬಡತನದ ರೇಖೆಯನ್ನು ತಗ್ಗಿಸಿ ಅಂತಿಮವಾಗಿ ಅದನ್ನು ಅಳಿಸಿಹಾಕಬೇಕೆಂಬ ಕನಸನ್ನು ಕಾಣಲಾಗಿತ್ತು. ಬೃಹತ್ ಬ್ಯಾಂಕುಗಳ ಗ್ರಾಮೀಣ ಶಾಖಾ ಜಾಲದ ನಿರ್ಮಾಣದ ಜೊತೆಗೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿಂಗ್ ಎಂಬ ಹೊಸ ಪ್ರಯೋಗವೊಂದು ಕಾರ್ಯರೂಪಕ್ಕೆಬಂದಿತ್ತು. ಹೀಗೆ ಮೂವತ್ತು ವರ್ಷಗಳಲ್ಲಿ ಕ್ರಮಿಸಿದ ದಿಕ್ಕುಗಳೂ, ಮಾಡಲಾದ ಸಾಧನೆಗಳೂ, ಅನುಭವಿಸಲಾದ ವೈಫಲ್ಯಗಳೂ ಅನೇಕ.

### ಸಾಫಲ್ಯ–ವೈಫಲ್ಯ

ಆದರೂ ಒಟ್ಟಿನಲ್ಲಿ ಬ್ಯಾಂಕ್ ರಾಷ್ಟ್ರೀಕರಣದ ಉದ್ದೇಶಗಳು ಸಫಲವಾಗಿವೆಯೆಂಬುದೇ ಸಾಮಾನ್ಯವಾಗಿ ಇರುವ ತಿಳಿವಳಿಕೆ. ಬ್ಯಾಂಕಿಂಗ್ ವ್ಯವಸ್ಥೆ ಭೌಗೋಲಿಕವಾಗಿ ಹಾಗೂ ಪ್ರಾದೇಶಿಕವಾಗಿ ಅಗಾಧವಾಗಿ ವಿಸ್ತರಿಸಿದೆ. ಪ್ರಾದೇಶಿಕ ಆರ್ಥಿಕ ಅಸಮತೋಲಗಳ ನಿವಾರಣೆಯಾಗಿದೆ. ಅಲಕ್ಷ್ಯಕ್ಕೆ ಒಳಗಾದ ವಲಯಗಳಿಗೆ ಉದರಿ ದೊರಕುವಂತಾಗಿದೆ. ಚೈತನ್ಯಹೀನವಾದ, ಲಾಭಪ್ರದವೆನಿಸದ ಚಟುವಟಿಕೆಗಳಿಗೂ ಸಾಲ ಲಭ್ಯವಿದೆ. ಪ್ರಾದೇಶಿಕ ವೈವಿಧ್ಯೀಕರಣದ ಜೊತೆಗೆ ಕಾರ್ಯಭಾರಾತ್ಮಕ ವೈವಿಧ್ಯೀಕರಣವೂ ಸಾಧಿಸಿದೆ. ಆಧಾರವಿದ್ದರೆ ಸಾಲ ಎಂಬ ದೃಷ್ಟಿಯ ಬದಲು, ಉದ್ದೇಶಕ್ಕೆ ಅನುಗುಣ

ವಾಗಿ ಸಾಲ ಎಂಬ ದೃಷ್ಟಿ ಉಂಟಾಗಿದೆ. ಹಣವಿಲ್ಲವೆಂಬ ಕಾರಣದಿಂದಲೇ ಯಾವುದೇ ಆರ್ಥಿಕ ಚಟುವಟಿಕೆ ಸೊರಗಬಾರದು, ಯಾವುದೇ ಅಭಿವೃದ್ಧಿಕಾರ್ಯ ನಿಲ್ಲಬಾರದು, ದಾರಿದ್ರ್ಯ ನಿರ್ಮೂಲನ ಪ್ರಯತ್ನಕ್ಕೆ ಅಡ್ಡಿಯಾಗಬಾರದು ಎಂಬ ಆಶಯ ಬಹುತೇಕ ಫಲಿಸುವಂತಾಗಿದೆ.

ಆದರೆ ಈ ಮೂರು ದಶಕಗಳಲ್ಲಿ ಎದುರಾಗಿರುವ ಸಮಸ್ಯೆಗಳೇನೂ ಸಾಮಾನ್ಯವಲ್ಲ. ಗಾತ್ರಾನುಗುಣ ವಿಸ್ತರಣೆಯ ಫಲವಾಗಿ ಬ್ಯಾಂಕುಗಳ ಕಲಾಪಗಳಲ್ಲಿ ದಕ್ಷತೆ ಕುಗ್ಗಿತು. ಆಡಳಿತ ವ್ಯವಸ್ಥೆಯ ಹಸ್ತಕ್ಷೇಪ ಅಧಿಕವಾಯಿತು. ತೀರ್ಮಾನ ತೆಗೆದುಕೊಳ್ಳುವ ವಿಚಾರದಲ್ಲಿ ಬ್ಯಾಂಕಿಂಗ್ ವ್ಯವಸ್ಥಾಪಕ ವರ್ಗದ ಪಾತ್ರ ಬಹುತೇಕ ಇರಲಿಲ್ಲವೆಂದೇ ಹೇಳಬೇಕು. ರಾಜಕೀಯ ಉದ್ದೇಶಗಳೇ ಪ್ರಧಾನವಾದುವು. ಬ್ಯಾಂಕಿಂಗಿನ ನೀತಿ ನಿಯಮಗಳೆಲ್ಲ ಗಾಳಿಯಲ್ಲಿ ತೂರಿಹೋದುವು. ಬ್ಯಾಂಕುಗಳಿಗೆ ಬರಬೇಕಾದ ಬಾಕಿ ಭೂತಾಕಾರಕ್ಕೆ ಬೆಳೆಯಿತು. ವಸೂಲಿ ಬಹುತೇಕ ಅಸಾಧ್ಯವೆನಿಸಿತು. ಬ್ಯಾಂಕುಗಳು ನೀಡಿದ ಸಾಲಗಳು ಸರಸ್ವತೀಪ್ರಸನ್ನವಾಗಿ, ಅವೆಲ್ಲ ನಿಷ್ಕ್ರಿಯ ಆಸ್ತಿಗಳಾದುವು. ಪುಸ್ತಕದಲ್ಲಿ ಲಾಭದ ರಾಶಿ. ವಾಸ್ತವವಾಗಿ ಎಲ್ಲವೂ ಮರೀಚಿಕೆ. ಇದರ ಪರಿಣಾಮವಾಗಿ ಬ್ಯಾಂಕುಗಳ ಲಾಭದಾಯಕತೆ ಕುಗ್ಗಿತು.

### ನರಸಿಂಹಂ ಸಮಿತಿ

ಈ ಅನುಭವದ ಹಿನ್ನೆಲೆಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಸುಧಾರಣೆ ಅತ್ಯಂತ ಜರೂರಾದ್ದು ಎನಿಸಿತು. ಇಡೀ ಅರ್ಥವ್ಯವಸ್ಥೆಯೇ ಮರುಪರಿಶೀಲನೆಗೆ, ಪುನರ್ರಚನೆಗೆ, ಕೇಂದ್ರದ ಹಿಡಿತದಿಂದ ಬಿಡುಗಡೆಗೆ ಒಳಗಾಗುವುದು ಅವಶ್ಯವೆನಿಸಿರುವಾಗ, ಬ್ಯಾಂಕಿಂಗ್ ವಲಯ ಇದರಿಂದ ಹೊರಗೆ ಉಳಿಯುವುದು ಹೇಗೆ ? ಇದನ್ನು ಪರಿಶೀಲಿಸಿ ಸುಧಾರಣೆಗಳನ್ನು ಶಿಫಾರಸು ಮಾಡಬೇಕೆಂದೇ ನರಸಿಂಹಂ ಸಮಿತಿಯ ರಚನೆ ಆದದ್ದು. ಬ್ಯಾಂಕಿಂಗ್ ಕ್ಷೇತ್ರದಲ್ಲಿ ತಲೆದೋರಿದ್ದ ಸಮಸ್ಯೆಗಳನ್ನೆಲ್ಲ ಪರಿಶೀಲಿಸಿ, ಅವಕ್ಕೆ ಸಮಗ್ರವಾದ ಉಪಾಯಗಳನ್ನು ಸೂಚಿಸಿದ್ದು ನರಸಿಂಹಂ ಸಮಿತಿಯ ಸಾಧನೆ.

### ಪುನಸ್ಸಂರಚನೆ

ಮೊದಲನೆಯದಾಗಿ ಬ್ಯಾಂಕಿಂಗ್ ವ್ಯವಸ್ಥೆಯ ಪುನಸ್ಸಂರಚನೆಯ ಪ್ರಶ್ನೆ. ದೇಶದಲ್ಲಿರುವ ಬ್ಯಾಂಕಿಂಗ್ ಸಂಸ್ಥೆಗಳ ವಿಸ್ತರಣೆಯಲ್ಲಿ ಯಾವುದೇ ತರ್ಕಬದ್ಧತೆ ಇಲ್ಲ. ಅತಿವ್ಯಾಪ್ತಿ ಹಾಗೂ ಅವ್ಯಾಪ್ತಿಯ ದೋಷಗಳು ಎದ್ದು ಕಾಣುತ್ತಿವೆ. ಇವನ್ನೆಲ್ಲ ನಿವಾರಿಸಲು ಇಡೀ ಬ್ಯಾಂಕಿಂಗ್ ವ್ಯವಸ್ಥೆಯನ್ನು ನಾಲ್ಕು ಸ್ತರಗಳಲ್ಲಿ ಮರುವಿಂಗಡಿಸಬೇಕು, ಪುನಸ್ಸಂರಚಿಸಬೇಕು ಎಂಬುದು ನರಸಿಂಹಂ ಸಮಿತಿಯ ಒಂದು ಮುಖ್ಯ ಶಿಫಾರಸು. ಅಂತರರಾಷ್ಟ್ರೀಯ, ರಾಷ್ಟ್ರೀಯ, ಸ್ಥಳೀಯ ಹಾಗೂ ಗ್ರಾಮೀಣ ಸ್ತರಗಳಲ್ಲಿ ಕೆಲಕೆಲವೇ ಬ್ಯಾಂಕುಗಳು ಇರುವಂತಾಗಬೇಕು—ಎಂಬುದು ಅದರ ಸೂಚನೆ.

### ವಿಸ್ತರಣೆ

ಬ್ಯಾಂಕ್ ವಿಸ್ತರಣೆಯ ವಿಚಾರದಲ್ಲಿ ಉದಾರ ನೀತಿಯನ್ನು ಅನುಸರಿಸಬೇಕೆಂಬುದು ಸಮಿತಿಯ ಇನ್ನೊಂದು ಸಲಹೆ. ಈ ಹಿಂದೆ ಹೊಸದಾಗಿ ಬ್ಯಾಂಕುಗಳನ್ನು ಸ್ಥಾಪಿಸುವಂತಿರಲಿಲ್ಲ. ಅದಕ್ಕೆ ರಿಸರ್ವ್ ಬ್ಯಾಂಕಿನ, ಸರ್ಕಾರದ ಅನುಮತಿ ಬೇಕಿತ್ತು. ಯಾವುದೇ ಬ್ಯಾಂಕು ಬೆಳೆದರೆ ಅದನ್ನು ಸರ್ಕಾರ ರಾಷ್ಟ್ರೀಕರಿಸುವುದೆಂಬ ಅಂಜಿಕೆಯೂ ಇತ್ತು. ಇನ್ನು ಮುಂದೆ ಯಾವುದೇ ಬ್ಯಾಂಕಿನ ರಾಷ್ಟ್ರೀಕರಣ ಬೇಡವೆಂಬುದು ನರಸಿಂಹಂ ಸಮಿತಿಯ ಅಭಿಪ್ರಾಯ. ಖಾಸಗಿ ವಲಯದ ಬ್ಯಾಂಕುಗಳಿಗೂ ಅವಕಾಶವಿರಲಿ, ಬ್ಯಾಂಕಿಂಗ್ ಕ್ಷೇತ್ರದಲ್ಲೂ ಸ್ಪರ್ಧೆಯ ವಾತಾವರಣ ಇರಲಿ ಎಂಬುದು ಸಮಿತಿಯ ಇನ್ನೊಂದು ಸಲಹೆ.

### ಬಂಡವಾಳಪರ್ಯಾಪ್ತತೆ

ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳು ಅಗಾಧವಾಗಿ ಬೆಳೆದಿವೆ. ಅವುಗಳ ಶಾಖೆಗಳು ಹಬ್ಬಿವೆ. ಠೇವಣಿಗಳ ಸಂಗ್ರಹಣೆಯಲ್ಲಿ ಅಗಾಧ ಬೆಳವಣಿಗೆಯಾಗಿದೆ. ಸಾಲ ನೀಡಿಕೆಯೂ ಅಧಿಕವಾಗಿದೆ. ಹೀಗೆ ವಿಸ್ತರಿಸಿದ ಕಲಾಪಗಳಿಗೆ ಅನುಗುಣವಾಗಿ ಬ್ಯಾಂಕುಗಳ ಸ್ವಂತ ಬಂಡವಾಳ ಅಧಿಕವಾಗಿಲ್ಲ. ಇದು ಆರೋಗ್ಯಕರ ಬ್ಯಾಂಕಿಂಗಿನ ಲಕ್ಷಣವಲ್ಲ. ಭದ್ರತೆಗೆ ಇದರಿಂದ ಅಪಾಯ. ಆದ್ದರಿಂದ ಅಂತರರಾಷ್ಟ್ರೀಯ ಮಾನದಂಡಗಳಿಗೆ ಅನುಗುಣವಾಗಿ ಬ್ಯಾಂಕುಗಳ ಬಂಡವಾಳ ತಳವನ್ನು ವಿಸ್ತರಿಸಬೇಕು, ನಷ್ಟಸಂಭಾವ್ಯತಾ ಭಾರಿತ ಆಸ್ತಿಗಳಿಗೆ ನಿಗದಿಯಾದ ಅನುಪಾತದಲ್ಲಿ ಬಂಡವಾಳ ಇರಬೇಕು. ಬಂಡವಾಳಪರ್ಯಾಪ್ತತೆಯನ್ನು ಕಡೆಗಣಿಸಬಾರದು.

### ತರ್ಕಬದ್ಧ ಬಡ್ಡಿದರ ಸಂರಚನೆ

ನರಸಿಂಹಂ ಸಮಿತಿಯ ಇನ್ನೊಂದು ಮುಖ್ಯ ಸಲಹೆಯೆಂದರೆ, ಬಡ್ಡಿ ದರಗಳ ವಿನಿಯಮನ ಹಾಗೂ ಬಡ್ಡಿ ಸಂರಚನೆಯ ತರ್ಕಬದ್ಧತೆ. ಯೋಜಿತ ಅರ್ಥವ್ಯವಸ್ಥೆಯಲ್ಲಿ ಬಡ್ಡಿ ದರಗಳು ಸರ್ಕಾರದ ನೀತಿಗೆ ಹಾಗೂ ರಿಸರ್ವ್ ಬ್ಯಾಂಕಿನ ನಿಯಂತ್ರಣಕ್ಕೆ ಒಳಪಟ್ಟಿದ್ದುವು. ಬ್ಯಾಂಕುಗಳು ಠೇವಣಿಗಳ ಮೇಲೆ ಯಾವ ಬಡ್ಡಿ ದರಗಳನ್ನು ನೀಡಬೇಕು, ಅವು ನೀಡುವ ಯಾವಯಾವ ಬಗೆಯ ಸಾಲಗಳಿಗೆ ಹಾಗೂ ಯಾವಯಾವ ವಲಯಕ್ಕೆ ನೀಡುವ ನೆರವುಗಳಿಗೆ ಯಾವಯಾವ ದರಗಳಲ್ಲಿ ಬಡ್ಡಿ ವಿಧಿಸಬೇಕು ಎಂಬುದನ್ನೆಲ್ಲ ರಿಸರ್ವ್ ಬ್ಯಾಂಕ್ ಸೂಚಿಸುತ್ತಿತ್ತು. ದುರ್ಬಲ ವರ್ಗಗಳಿಗೆ ಹಾಗೂ ಆದ್ಯತಾ ವಲಯಕ್ಕೆ ನೀಡುವ ಸಾಲಗಳ ಮೇಲೆ ಸುಲಭ ಬಡ್ಡಿ ದರಗಳನ್ನು ನಿಗದಿಪಡಿಸುತ್ತಿತ್ತು. ಅನೇಕ ವೇಳೆ ಈ ಬಡ್ಡಿ ಸಂರಚನೆ ಅತ್ಯಂತ ಯಾದೃಚ್ಛಿಕವೆಂದೆನಿಸುತ್ತಿತ್ತು. ವಿವಿಧ ವಲಯಗಳಿಗೆ ಸಂಪನ್ಮೂಲಗಳ ಹರಿವಿನಲ್ಲಿ ಅಡೆತಡೆಗಳುಂಟಾಗುತ್ತಿದ್ದುವು. ಮಾರುಕಟ್ಟೆಯ ಅಗತ್ಯಗಳನ್ನು ಕಡೆಗಣಿಸಿದಂತಾಗುತ್ತಿತ್ತು. ಈ ಪರಿಸ್ಥಿತಿಯನ್ನು ತಪ್ಪಿಸಬೇಕೆಂಬುದು ನರಸಿಂಹಂ ಸಮಿತಿಯ ಇನ್ನೊಂದು

ಶಿಫಾರಸು. ಉಳಿತಾಯದ ಪೂರೈಕೆ, ಬಂಡವಾಳದ ಬೇಡಿಕೆ, ವಿನಿಯೋಜನೆಯ ಗಾತ್ರ ಮತ್ತು ವಿವಿಧ ವಲಯಗಳ ಅಗತ್ಯ—ಇವುಗಳಿಗೆ ಅನುಗುಣವಾಗಿ ಬಡ್ಡಿದರಗಳು ನಿರ್ಧಾರವಾಗಬೇಕೇ ವಿನಾ, ಯಾವುದೇ ಪ್ರಾಧಿಕಾರದ ನಿಯಂತ್ರಣಕ್ಕೆ, ನಿರ್ದೇಶನಕ್ಕೆ ಇದು ಅಧೀನವಾಗಿರಬಾರದು ಎಂಬುದು ನರಸಿಂಹಂ ಸಮಿತಿಯ ಅಭಿಪ್ರಾಯ.

## ನಿರ್ದೇಶಿತ ಸಾಲ ನೀತಿ ರದ್ದು

ಸಾಲ ನೀಡಿಕೆ ಮತ್ತು ಬಡ್ಡಿ ದರಗಳಿಗೆ ನೇರವಾಗಿ ಸಂಬಂಧಿಸಿದ ಇನ್ನೊಂದು ವಿಚಾರವೆಂದರೆ, ನಿರ್ದೇಶಿತ ಉದರಿ ಕಾರ್ಯಕ್ರಮ. ಬ್ಯಾಂಕು ಯಾವಯಾವ ವಲಯಕ್ಕೆ ಎಷ್ಟೆಷ್ಟು ಸಾಲ ನೀಡಬೇಕು, ಯಾವ ಬಡ್ಡಿ ದರ ವಿಧಿಸಬೇಕು, ಏನು ಷರತ್ತುಗಳನ್ನು ಹಾಕಬೇಕು—ಎಂಬುದೆಲ್ಲ ರಿಸರ್ವ್ ಬ್ಯಾಂಕಿನ ವಿವೇಚನೆಗೆ ಒಳಪಟ್ಟಿತ್ತು. ಈ ವಿಚಾರದಲ್ಲಿ ತೀರ್ಮಾನ ತೆಗೆದುಕೊಳ್ಳುವ ಸ್ವಾತಂತ್ರ್ಯ ಬ್ಯಾಂಕುಗಳಿಗೆ ಇರಲಿಲ್ಲ. ದುರ್ಬಲ ವರ್ಗಗಳಿಗೆ ಸಾಲ ನೀಡುವ ದೇಶವ್ಯಾಪಿ ಕಾರ್ಯಕ್ರಮವೊಂದು ಜಾರಿಗೆ ಬಂದಿತ್ತು. ಸಾಲ ಮೇಳಗಳು ಸರ್ಕಾರ ಘೋಷಿಸಿಕೊಂಡ ಸದುದ್ದೇಶದ ವಿಪರ್ಯಾಸಗಳೆನಿಸಿದ್ದುವು, ವಿಕರಾಳ ರೂಪ ತಳೆದಿದ್ದುವು. ಬ್ಯಾಂಕುಗಳು ಮಂತ್ರಿಗಳು ಹೇಳಿದಂತೆ ಹೆಬ್ಬೆಟ್ಟು ಗುರುತು ಒತ್ತಿಸಿಕೊಂಡು ಸಾಲ ನೀಡಬೇಕಾಗಿತ್ತು. ಈ ಸಮಾರಾಧನೆಗಳು ಬ್ಯಾಂಕ್ ಉದರಿ ನೀತಿಯನ್ನೇ ಗಾಳಿಗೆ ತೂರಿಬಿಟ್ಟುವು. ಈ ವಿವೇಚನಾ ರಹಿತ ಸಾಲಗಳನ್ನು ಫಲಾನುಭವಿಗಳು ಹಿಂದಿರುಗಿಸಬೇಕಿರಲಿಲ್ಲ. ಅಸಲೇ ಕೊಡಬೇಕಿಲ್ಲವೆಂದ ಮೇಲೆ ಬಡ್ಡಿ ಪಾವತಿ ಮಾಡುವ ವಿಷಯವೆಲ್ಲಿ ಬಂತು? ಬ್ಯಾಂಕುಗಳು ಕಂಡಕಂಡವರಿಗೆಲ್ಲ ಹಣ ಹಂಚುವ, ಆಮೇಲೆ ಒಟ್ಟೊಟ್ಟಾಗಿ ಆ ಸಾಲವನ್ನೆಲ್ಲ ಮಾಫಿ ಮಾಡುವ, ಮನ್ನಾ ಮಾಡುವ, ಸರ್ಕಾರದ ರಬ್ಬರ್ ಠಸ್ಸೆಗಳಾಗಿ ಪರಿಣಮಿಸಿದುವು. ಆದ್ದರಿಂದ ನಿರ್ದೇಶಿತ ಸಾಲ ನೀಡಿಕೆಯನ್ನು ಕ್ರಮಕ್ರಮವಾಗಿ ಕಡಮೆ ಮಾಡಿ ರದ್ದು ಮಾಡಬೇಕು. ಆದ್ಯತಾವಲಯವನ್ನು ಕಟ್ಟುನಿಟ್ಟಾದ ವ್ಯಾಖ್ಯೆಗೆ ಒಳಪಡಿಸಬೇಕು. ಬ್ಯಾಂಕ್‌ಸಾಲ ಸಾರ್ಥಕವಾಗಬೇಕೆಂಬುದು ನರಸಿಂಹಂ ಸಮಿತಿಯ ಇನ್ನೊಂದು ಆಶಯ.

## ಮೀಸಲು ಅನುಪಾತ ಇಳಿತ

ಸರ್ಕಾರದ ಒಡೆತನಕ್ಕೆ ಒಳಪಟ್ಟ ಬ್ಯಾಂಕುಗಳು ಸರ್ಕಾರದ ದರದುಗಳಿಗೆ ಹಣ ಒದಗಿಸುವ ಯಂತ್ರಗಳಾಗಿ ಮಾರ್ಪಟ್ಟಿದ್ದುವು. ಸರ್ಕಾರ ಯೋಜನೆಗಳ ಅಡಿಯಲ್ಲಿ ಹಾಗೂ ಬೇರೆ ಉದ್ದೇಶಗಳಿಗಾಗಿ ಅಗಾಧವಾಗಿ ವೆಚ್ಚ ಮಾಡಬೇಕಾಗಿತ್ತು. ಇವಕ್ಕೆ ಬ್ಯಾಂಕುಗಳು ಹಣ ಒದಗಿಸುವಂತೆ ಮಾಡಲು ಸರ್ಕಾರಕ್ಕೆ ಇದ್ದ ಒಂದು ಉಪಾಯವೆಂದರೆ, ಪರಿನಿಯತ ದ್ರವತ್ವ ಅನುಪಾತ—ಎಂದರೆ ಬ್ಯಾಂಕುಗಳು ತಮ್ಮ ಠೇವಣಿಗಳ ಹಣದಲ್ಲಿ ಒಂದು ಗೊತ್ತಾದ ಹಣವನ್ನು ಸರ್ಕಾರಿ ಪ್ರತಿಭೂತಿಗಳಲ್ಲಿ ತೊಡಗಿಸಬೇಕೆಂಬ—ನಿಯಮ. ಈ ಸರ್ಕಾರಿ ಪ್ರತಿಭೂತಿಗಳನ್ನು ಯಾವಾಗ ಬೇಕಾದರೂ ಬ್ಯಾಂಕುಗಳು ಸುಲಭವಾಗಿ ನಗದಾಗಿ ಪರಿವರ್ತಿಸಿಕೊಳ್ಳಬಹುದೆಂಬುದು ನಂಬಿಕೆ. ಎಂದರೆ ಅವುಗಳನ್ನು ಹೊಂದಿದ್ದರೆ ಬ್ಯಾಂಕು ದ್ರವತ್ವ (ನಗದು ಗುಣ ಅಥವಾ ಸಾಮರ್ಥ್ಯ) ಹೊಂದಿದ್ದಂತೆ, ಒಟ್ಟು ಠೇವಣಿಯಲ್ಲಿ ಯಾವ ಪ್ರಮಾಣವನ್ನು ಈ ಪ್ರತಿಭೂತಿಗಳ ರೂಪದಲ್ಲಿಡಬೇಕೆಂಬುದನ್ನು ಶಾಸನದ ಮೂಲಕ ಗೊತ್ತುಪಡಿಸಲಾಗುತ್ತಿತ್ತು. ಶಾಸನ ವಿಧಿಸಿದ ನಿಯಮವಿದು ಅಥವಾ ಶಾಸನ ವಿಧಿಸಿದ (ಪರಿನಿಯತ) ದ್ರವತ್ವ (ನಗದು ಗುಣ) ಅನುಪಾತದ ನಿಯಮ. ಬ್ಯಾಂಕುಗಳ ಠೇವಣಿಗಳಲ್ಲಿ ಹೆಚ್ಚು ಕಡಮೆ ಮೂರನೆಯ ಒಂದು ಪಾಲನ್ನು ಇದಕ್ಕಾಗಿ ತೆಗೆದಿರಿಸಬೇಕಾಗುತ್ತಿತ್ತು. ಬ್ಯಾಂಕುಗಳ ಕೈಯಲ್ಲಿ ಹೆಚ್ಚು ಹಣವಿದ್ದರೆ ವಿವೇಚನಾರಹಿತವಾಗಿ ಎಲ್ಲ ಬಗೆಯ ಉದ್ಯಮಗಳಿಗೂ ಇತರ ಚಟುವಟಿಕೆಗಳಿಗೂ ಅವು ಸಾಲ ನೀಡಬಹುದು. ದೇಶದಲ್ಲಿ ಹಣದುಬ್ಬರದ ಪರಿಸ್ಥಿತಿಗೆ ಎಡೆ ಉಂಟುಮಾಡಬಹುದು. ಆದ್ದರಿಂದ ಬ್ಯಾಂಕುಗಳು ಸುಭದ್ರವಾಗಿ ಆರೋಗ್ಯಕರವಾಗಿ ಕಲಾಪ ನಡಸುವಂತೆ ಅವುಗಳ ರೆಕ್ಕೆಪುಕ್ಕಗಳನ್ನು ಕತ್ತರಿಸುವ ಉದ್ದೇಶದಿಂದ ಬ್ಯಾಂಕುಗಳು ಠೇವಣಿಗಳಲ್ಲಿ ಸ್ಥೂಲವಾಗಿ ಶೇ. 15ರಷ್ಟು ಭಾಗವನ್ನು ಕಡ್ಡಾಯವಾಗಿ ರಿಸರ್ವ್ ಬ್ಯಾಂಕಿನ ಬಳಿ ಇಡಬೇಕೆಂಬ ನಿಯಮವಿತ್ತು. ಬ್ಯಾಂಕುಗಳ ಉಸಿರಾಟಕ್ಕೆ ಅನೇಕ ವೇಳೆ ಇದು ತೊಂದರೆ ಒಡ್ಡುತ್ತಿದೆಯೆನಿಸಿತ್ತು. ಈ ನಗದು ಮೀಸಲು ಅನುಪಾತ ಬಹಳ ಕಠಿಣ ಎಂದು ಹಲವರು ಹೇಳುತ್ತಿದ್ದರು. ಪರಿನಿಯತ ದ್ರವತ್ವ ಅನುಪಾತ, ನಗದು ಮೀಸಲು ಅನುಪಾತ, ಆದ್ಯತಾ ವಲಯಕ್ಕೆ ಸುಲಭ ದರದಲ್ಲಿ ಸಾಲ ನೀಡಿಕೆ—ಈ ಮೂರು ಕ್ರಮಗಳಿಂದಾಗಿ ಬ್ಯಾಂಕುಗಳ ಸುಮಾರು ಮೂರನೆಯ ಎರಡರಷ್ಟು ಸಂಪನ್ಮೂಲಗಳೇ ಅವುಗಳ ವ್ಯವಹಾರಕ್ಕೆ ಇಲ್ಲದಂತಾದಾಗ, ಕೃಶವಾದ ಸಂಪನ್ಮೂಲಗಳಿಂದ ಬ್ಯಾಂಕುಗಳು ಹೇಗೆ ತಾನೇ ಲಾಭಪ್ರದವಾಗಿ ಕಲಾಪ ನಡಸಿಯಾವು? ಹೀಗಾಗಿ, ಅನೇಕ ಬ್ಯಾಂಕುಗಳು ನಷ್ಟಜೀವಿಗಳೆನಿಸಿದುವು; ಅವುಗಳ ಅಂತಿಮ ಲೆಕ್ಕಗಳ ತಳಗಳು ರಕ್ತವರ್ಣಕ್ಕೆ ತಿರುಗಿದುವು; ಮುಟ್ಟಿದರೆ ಚುರುಕು ಮುಟ್ಟಿಸತೊಡಗಿದುವು. ಭಾರತೀಯ ಬ್ಯಾಂಕುಗಳೆಂಬ ಡಿನೋಸಾರುಗಳು ಸಂಪೂರ್ಣವಾಗಿ ನಿರ್ವಂಶಿಗಳಾಗಿ ಅಳಿದುಹೋಗುವ ಕಾಲ ಬಹುದೂರವಿಲ್ಲ ಎಂದು ಅನೇಕರು ಭಾವಿಸಿದ್ದರು. ಅಂತೆಯೇ ನರಸಿಂಹಂ ಸಮಿತಿ ಈ ಪರಿಸ್ಥಿತಿಯನ್ನು ದೂರ ಮಾಡಲು ಸಲಹೆ ನೀಡಿತು. ಬ್ಯಾಂಕುಗಳು ರಕ್ತಹೀನತೆಯಿಂದ ನರಳದಂತೆ—ಬೇಕಾದಾಗ ಅವಕ್ಕೆ ನಗದು ದೊರಕುವಂತೆ—ಮಾಡುವ ಉದ್ದೇಶದಿಂದ ನಿಯೋಜಿಸಲಾದ ಪರಿನಿಯತ (ಶಾಸನ ವಿಧಿಸಿದ) ದ್ರವತ್ವ (ನಗದು ಗುಣ) ಹಾಗೂ ನಗದು ಮೀಸಲು ಅನುಪಾತಗಳನ್ನು ಕ್ರಮಕ್ರಮವಾಗಿ ಇಳಿಸಿ, ಬ್ಯಾಂಕುಗಳ ಆರೋಗ್ಯ ಸಾಧನೆಗೆ ಹಾಗೂ ಅರ್ಥವ್ಯವಸ್ಥೆಯ ಬೆಳವಣಿಗೆಗೆ ಅಗತ್ಯವಾಗುವ ಮಟ್ಟದಲ್ಲಿ ಇವನ್ನು ನಿಲ್ಲಿಸಬೇಕೆಂಬುದು ನರಸಿಂಹಂ ಸಮಿತಿಯ ಇನ್ನೊಂದು ಆಶಯ.

### ಅನುಮಾನ/ಕರಡು ಸಾಲ ಮೀಸಲು

ಸರ್ಕಾರದ ಒಡೆತನಕ್ಕೆ ಸೇರಿದ ಬ್ಯಾಂಕುಗಳು ಸರ್ಕಾರದ ನಾನಾ ನಿರ್ದೇಶನಗಳಿಗೆ ಒಳಪಟ್ಟು ತಮ್ಮ ಸಾಲ ನೀಡಿಕೆಯ ಕಲಾಪವನ್ನು ನಡಸಬೇಕಾಗಿ ಬಂದಾಗ, ಇಂಥ ಸಂದರ್ಭಗಳಲ್ಲಿ ಅವಶ್ಯವಾಗಿರಬೇಕಾದ ವಿವೇಚನೆ ನಷ್ಟವಾದಾಗ, ಬ್ಯಾಂಕುಗಳ ಮುಂಗಡಗಳಲ್ಲಿ ಗಮನಾರ್ಹ ಭಾಗ ಅನುಮಾನ ಸಾಲಗಳಾಗಿ ಪರಿಣಮಿಸಿದ್ದು ಸಹಜವೇ. ಬ್ಯಾಂಕ್ ಉದರಿಗೆ ಪ್ರತಿಯಾಗಿ ಗಳಿಸಲಾದ ಆಸ್ತಿಗಳು ಕಳಪೆಯಾಗಿದ್ದುವು. ಸಾಲಗಳ ಗುಣಮಟ್ಟ ಅಸಮರ್ಪಕವೆನಿಸಿತ್ತು. ಅನುಮಾನ ಹಾಗೂ ಕರಡು ಋಣಗಳಿಗೆ ಸಾಕಷ್ಟು ಉಪಬಂಧ ಮಾಡದಿದ್ದದ್ದು ಒಂದು ದೋಷ. ಬ್ಯಾಂಕ್ ಆಸ್ತಿಗಳನ್ನು ಆರೋಗ್ಯಕರವಾದ ರೀತಿಯಲ್ಲಿ ಪುನರ್ರಚಿಸುವುದು ಅಗತ್ಯವಾಗಿತ್ತು. ಬ್ಯಾಂಕುಗಳು ಈ ಕಡೆಗೆ ಸಾಕಷ್ಟು ಲಕ್ಷ್ಯ ಕೊಡಲು ಸಾಧ್ಯವಾಗದಂಥ ಪರಿಸ್ಥಿತಿ ಉದ್ಭವಿಸಿತ್ತು. ಬ್ಯಾಂಕುಗಳು ಬಿಳಿಯಾನೆಗಳು, ಅವು ನಷ್ಟಜೀವಿಗಳು ಎಂಬ ಅಪವಾದವನ್ನು ತಪ್ಪಿಸಿಕೊಳ್ಳುವುದಕ್ಕೆ ಅವು ಯತ್ನಿಸಿದುವು. ಹೀಗಾಗಿ ಬ್ಯಾಂಕುಗಳ ಅಂತಿಮ ಲೆಕ್ಕಗಳು ಹಾಗೂ ಆಸ್ತಿ-ಹೊಣೆ ತಃಖ್ತೆಗಳು ಅವುಗಳ ನಿಜಸ್ಥಿತಿಯನ್ನು ತೋರಿಸುವಂತಿರಲಿಲ್ಲ. ನೀಡಿದ ಸಾಲಗಳ ವಸೂಲಿಯಾಗದೆ ಸಂಭವಿಸಬಹುದಾದ ನಷ್ಟವನ್ನು ಲಾಭನಷ್ಟ ತಃಖ್ತೆಯ ಲಾಭದಿಂದ ತೆಗೆದಿರಿಸಿದ್ದು ಇದಕ್ಕೆ ಕಾರಣ. ಬ್ಯಾಂಕುಗಳು ಈ ನಷ್ಟ ಸಂಭಾವ್ಯತೆಗೆ ಉಪಬಂಧ ಮಾಡಬೇಕು; ಅವುಗಳ ಆಸ್ತಿಗಳ ಪುನರ್ರಚನೆಗಾಗಿ, ಅವಕ್ಕೆ ಆರೋಗ್ಯ ದೊರಕಿಸಿಕೊಡುವ ಸಲುವಾಗಿ ಆಸ್ತಿ ಪುನರ್ರಚನಾ ನಿಧಿಯೊಂದನ್ನು ರಚಿಸಬೇಕು—ಎಂದು ನರಸಿಂಹಂ ಸಮಿತಿ ಶಿಫಾರಸು ಮಾಡಿತು.

### ರಿಸರ್ವ್ ಬ್ಯಾಂಕ್ ಅಧಿಕಾರ

ಭಾರತೀಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಇನ್ನೊಂದು ದಯನೀಯ ಸಂಗತಿಯೆಂದರೆ, ಅವು ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ಎರಡಕ್ಕೂತಗ್ಗಿ ಬಗ್ಗಿ ನಡೆಯಬೇಕಾಗಿದ್ದುದು, ಹೀಗಿದ್ದಾಗ ಅವ್ಯವಸ್ಥೆ, ಗೊಂದಲವುಂಟಾಗುವುದು ಸಹಜ. ಮಾರುಕಟ್ಟೆಯನ್ನು ನಾನಾ ದಿಗ್ಬಂಧನಗಳಿಂದ ಬಿಡುಗಡೆಮಾಡಿ ಉದಾರೀಕರಣವನ್ನು ಸಾಧಿಸುವ ಸಂಪೂರ್ಣ ಹೊಣೆ ಒಂದು ಸಂಸ್ಥೆಗೆ ಒಳಪಡಿಸಬೇಕು. ರಿಸರ್ವ್ ಬ್ಯಾಂಕ್ ಕೇಂದ್ರೀಯ ಬ್ಯಾಂಕಾದ್ದರಿಂದ ಈ ಕಾರ್ಯಭಾರವನ್ನು ಅದಕ್ಕೆ ಸಂಪೂರ್ಣವಾಗಿ ವಹಿಸಿಕೊಡಬೇಕೆಂಬುದು ಕೂಡ ನರಸಿಂಹಂ ಸಮಿತಿಯ ಅಭಿಪ್ರಾಯ.

ಈ ಸಮಿತಿಯ ವರದಿಯಲ್ಲಿ ಮಾಡಲಾದ ನಾನಾ ಸಲಹೆಗಳನ್ನು ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ಪರಿಶೀಲಿಸಿ ಅವನ್ನು ಕ್ರಮಕ್ರಮವಾಗಿ ಜಾರಿಗೆತರುವುದರಲ್ಲಿ ನಿರತವಾದುವು. ಬ್ಯಾಂಕಿಂಗ್ ವಲಯದ ಸುಧಾರಣೆಯ ಕಾರ್ಯವನ್ನು ರಿಸರ್ವ್ ಬ್ಯಾಂಕ್ ಅತ್ಯಂತ ಕಳಕಳಿಯಿಂದ ಕೈಗೆತ್ತಿಕೊಂಡಿತು. ನರಸಿಂಹಂ ಸಮಿತಿಯ ವರದಿಯ ಬಗ್ಗೆ ಟೀಕೆಗಳೂ ಬರದಿರಲಿಲ್ಲ. ತೀವ್ರ ಆರ್ಥಿಕ ಬಿಕ್ಕಟ್ಟನ್ನೊದಗಿಸುತ್ತಿದ್ದ ಕೇಂದ್ರ ಸರ್ಕಾರ ಅಂತರರಾಷ್ಟ್ರೀಯ ಹಣ ನಿಧಿ ಮತ್ತು ವಿಶ್ವ ಬ್ಯಾಂಕಿನ ಒತ್ತಡಕ್ಕೆ ಒಳಗಾಗಿ ಈ ಕಠೋರ ಕ್ರಮಗಳನ್ನು ಜಾರಿಗೆ ತರಲು ಒಂದು ನೆಪವಾಗಿ ನರಸಿಂಹಂ ಸಮಿತಿಯನ್ನು ನೇಮಿಸಿತೆಂದೂ ಆ ಸಮಿತಿಯ ಶಿಫಾರಸುಗಳೆಲ್ಲ ಈ ಸಂಸ್ಥೆಗಳು ಹೇಳಿ ಬರೆಯಿಸಿದವೆಂದೂ ಆರೋಪಗಳು ಬಂದುವು. ಇಡೀ ಆರ್ಥಿಕ ಸಂಧಾರಣೆಗೆ ವ್ಯಾಪಕವಾದ ವಿರೋಧ ಇಲ್ಲದಿರಲಿಲ್ಲ. ಸರ್ಕಾರಿ ವಲಯವನ್ನು ವಿಸರ್ಜಿಸಿ, ಖಾಸಗಿ ವಲಯ ಪ್ರಧಾನವಾದ ಬಂಡವಾಳಶಾಹಿ ವ್ಯವಸ್ಥೆಗೆ ಕೆಂಪು ಜಮಖಾನೆ ಹಾಸಲು ಸರ್ಕಾರ ಉದ್ಯುಕ್ತವಾಗಿದೆಯೆಂದೂ ಹೇಳಲಾಗುತ್ತಿತ್ತು.

ಅಂತೂ ಈ ಆರು ವರ್ಷಗಳಲ್ಲಿ ಬ್ಯಾಂಕಿಂಗ್ ವಲಯ ಸುಧಾರಣೆಯ ಹಾದಿಯಲ್ಲಿ ನಡೆದಿದೆ. ಇದನ್ನು ಮುನ್ನಡೆ ಎಂದು ಕೆಲವರು ಪ್ರಶಂಸಿಸಿದರೆ ಇದು ಹಿನ್ನಡೆಯೆಂದು ಹೇಳುವವರೂ ಇಲ್ಲದಿಲ್ಲ.

### ಸುಧಾರಣೆಯ ಕ್ರಮಗಳು

**ಬಂಡವಾಳಪರ್ಯಾಪ್ತತೆ:** ಮೊದಲನೆಯದಾಗಿ, ಬ್ಯಾಂಕುಗಳ ಬಂಡವಾಳ ಪರ್ಯಾಪ್ತತೆ. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು. ಉದ್ದವಾಗಿ ಬೆಳೆದರೆ ಹಾಸಿಗೆಯನ್ನು ಉದ್ದ ಮಾಡಲೇಬೇಕು. ಕಾಲು ಕತ್ತರಿಸುವುದು ಹಾನಿಕರ. ಬ್ಯಾಂಕಿನ ನಷ್ಟ ಸಂಭಾವ್ಯತಾ ಭಾರಿತ ಆಸ್ತಿಗಳ ಶೇ. 8ರಷ್ಟಾದರೂ ಬಂಡವಾಳ ಇರತಕ್ಕದ್ದೆಂಬುದು ಈ ನಿಟ್ಟಿನಲ್ಲಿ ಮೊದಲ ಹೆಜ್ಜೆ. ಒಂದು ಗೊತ್ತಾದ ಅವಧಿಯೊಳಗೆ ಇದನ್ನು ಸಾಧಿಸಬೇಕೆಂಬುದು ರಿಸರ್ವ್ ಬ್ಯಾಂಕಿನ ಆದೇಶ. ಬ್ಯಾಂಕುಗಳಿಗೆ ಹೆಚ್ಚಿನ ಸಂಪನ್ಮೂಲಗಳು ದೊರಕಿ, ಅವು ಬಿಡುಬೀಸಾಗಿ ತಮ್ಮ ಉದರಿ ನೀಡಿಕೆಯ ಕಲಾಪಗಳಲ್ಲಿ ತೊಡಗುವಂತೆ, ನಮ್ಯತೆ ಪಡೆದುಕೊಳ್ಳುವಂತೆ ಮಾಡಲು ನಗದು ಮೀಸಲು ಅನುಪಾತ ಮತ್ತು ಪರಿನಿಯಂತ (ಶಾಸನ ವಿಧಿಸಿದ) ದ್ರವತ್ವ (ನಗದು ಗುಣ) ಅನುಪಾತಗಳನ್ನು ಹಂತಹಂತವಾಗಿ ಇಳಿಸುವ ಕ್ರಮವನ್ನು ರಿಸರ್ವ್ ಬ್ಯಾಂಕ್ ತೆಗೆದುಕೊಂಡಿದೆ. ಮಾರುಕಟ್ಟೆಗೆ ಹೆಚ್ಚು ಹಣ ಹಾಗೂ ಉದ್ಯಮಗಳಿಗೆ ಹೆಚ್ಚು ಉದರಿ ಒದಗಿ ಬರುವಂತೆ ನೋಡಿಕೊಳ್ಳಲಾಗುತ್ತಿದೆ. ಉದರಿಯಿಲ್ಲದೆ ಯಾವುದೇ ಉದ್ಯಮ ಸೊರಗಬಾರದು, ಆರ್ಥಿಕ ಬೆಳವಣಿಗೆ ಅಕುಂಠಿತವಾಗಿ ಸಾಗಬೇಕು ಎಂಬುದು ಉದ್ದೇಶ. ಈ ಹಾದಿಯಲ್ಲಿ ನಡುನಡುವೆ ರಿಸರ್ವ್ ಬ್ಯಾಂಕು ಕೆಲವು ಆತಂಕಗಳನ್ನು ಎದುರಿಸಬೇಕಾಗಿ ಬಂದು, ತಾತ್ಕಾಲಿಕವಾಗಿ ನಗದು ಮೀಸಲು ಅನುಪಾತವನ್ನು ಸ್ವಲ್ಪ ಏರಿಸಬೇಕಾಗಿ ಬಂದರೂ, ಒಟ್ಟಿನಲ್ಲಿ ಈ ಕುರಿತಂತೆ ದಿಕ್ಕು ಬದಲಾಗಿಲ್ಲ.

### ಬಡ್ಡಿ ದರ ಸಂರಚನೆ

ಮುಕ್ತಮಾರುಕಟ್ಟೆಯ ಒಂದು ಮುಖ್ಯ ಲಕ್ಷಣವೆಂದರೆ, ಬಡ್ಡಿ ದರಗಳ ಸ್ವತಂತ್ರ ಚಲನಶೀಲತೆ, ಬಡ್ಡಿ ದರಗಳ ಸಂರಚನೆಯ ತರ್ಕಬದ್ಧತೆ. ರಿಸರ್ವ್ ಬ್ಯಾಂಕು ನಾನಾ ಬಡ್ಡಿ ದರಗಳನ್ನು ನಿರ್ಧರಿಸಿ ಜಾರಿಗೆ ತರುವ ಕಾರ್ಯವನ್ನು ಬಿಟ್ಟುಕೊಟ್ಟಿದೆ. ನಿಧಿಗಳ

ಬೇಡಿಕೆ–ಪೂರೈಕೆಗಳಿಗೆ ಅನುಗುಣವಾಗಿ ಬಡ್ಡಿ ದರಗಳು ಚಲಿಸು ವುದಕ್ಕೆ ಎಡೆಮಾಡಿಕೊಡಲಾಗಿದೆ. ಆರಂಭಿಕ ತೊಡಕುಗಳು ಹಲವಾರು. ದೀರ್ಘಕಾಲದ ಜಡತೆಯಿಂದಾಗಿ ಕೀಲುಗಳು ಜಡ್ಡು ಕಟ್ಟಿವೆ. ಆ ಜಡ್ಡು ಬಿಟ್ಟಾಗ ಸಹಜ ಚಲನೆ ಸಾಧ್ಯವಾದೀತು. ರಿಸರ್ವ್ ಬ್ಯಾಂಕು ಅಂತಿಮವಾಗಿ ವಿಧಿಸುವ ಬಡ್ಡಿ ದರವನ್ನು ಆಗಾಗ ಘೋಷಿಸುತ್ತಿದೆ. ಇದೊಂದು ಪರಾಮರ್ಶನ ದರ. ದೇಶದ ಆರ್ಥಿಕ ಸ್ಥಿತಿಗತಿಗಳ ದೃಷ್ಟಿಯಿಂದ ಬಡ್ಡಿ ದರ ನೀತಿ ಹೇಗಿರಬೇಕೆಂಬ ಬಗ್ಗೆ ರಿಸರ್ವ್ ಬ್ಯಾಂಕು ತನ್ನ ಇಂಗಿತವನ್ನು ಈ ರೀತಿ ವ್ಯಕ್ತಪಡಿಸುತ್ತಿದೆ. ಇದಕ್ಕೆ ಅನುಗುಣವಾಗಿ ಠೇವಣಿ ಬಡ್ಡಿ ದರ, ಬ್ಯಾಂಕುಗಳು ನೀಡುವ ಸಾಲದ ಮೂಲ ಬಡ್ಡಿ ದರ, ಇತರ ದರಗಳು ಎಲ್ಲವೂ ಹೊಂದಿಕೊಳ್ಳುವ ಪ್ರವೃತ್ತಿಗಳು ದೃಢವಾಗುವ ಸೂಚನೆ ತೋರುತ್ತಿದೆ. ಇಡೀ ಅರ್ಥವ್ಯವಸ್ಥೆಯೇ ಮುಕ್ತವಾತಾವರಣದಲ್ಲಿ ಕಾರ್ಯನಿರ್ವಹಿಸುವಂತೆ ಆದಾಗ, ಬ್ಯಾಂಕಿಂಗ್ ಮತ್ತು ಇತರ ಹಣಕಾಸು ವಲಯಗಳು ಬಲಿಷ್ಠವಾಗಿ ಬೆಳೆದಾಗ ಆರೋಗ್ಯಕರವಾದ ರೀತಿಯಲ್ಲಿ ಇದು ವರ್ತಿಸೀತು. ಇದು ಕ್ರಮೇಣ ಸಾಧಿಸ ಬೇಕಾದ ಬೆಳವಣಿಗೆ.

### ವರಮಾನ ಗುರುತಿಸುವಿಕೆಯ ಸೂತ್ರಗಳು

ಬ್ಯಾಂಕ್ ವ್ಯವಹಾರ ಸುರಕ್ಷಿತವಾಗಿರಬೇಕು, ಆರೋಗ್ಯಕರ ವಾಗಿರಬೇಕು. ಆದರೆ ಬ್ಯಾಂಕುಗಳು ಅಭದ್ರ ಬುನಾದಿಯ ಮೇಲೆ ತಮ್ಮ ಹಣದ ಸೌಧವನ್ನು ರಚಿಸಿಕೊಂಡಾಗ, ಯಾವಾಗೆಂದರೆ ಆಗ ಇಸ್ಪೀಟಿನ ಮನೆಯಂತೆ ಆ ಸೌಧ ಕುಸಿದೀತು. ಮರಳಿನ ಮೇಲೆ ಭವನದ ನಿರ್ಮಾಣ ಮಾಡುವುದು ಮೂರ್ಖತನದ ಪರಮಾವಧಿ. ಬ್ಯಾಂಕುಗಳು ರಾಷ್ಟ್ರೀಕೃತವಾದವಾಗಿರಲಿ, ಖಾಸಗಿಯವೇ ಆಗಿರಲಿ, ಎರಡೂ ಬಗೆಯವಕ್ಕೂ ಈ ಮಾತು ಅನ್ವಯ. ಒಳ್ಳೆಯ ಸಾಲ, ಕೆಟ್ಟ ಸಾಲ, ಅನುಮಾನ ಸಾಲ ಎಲ್ಲವುಗಳ ಮೇಲೂ ಬಡ್ಡಿ ವಸೂಲಾಗುವುದೆಂದು ನಂಬಿ, ಅದನ್ನೆಲ್ಲ ವರಮಾನವೆಂದು ಲಾಭ–ನಷ್ಟ ಲೆಕ್ಕದಲ್ಲಿ. ಬರಲಿರುವ ವರಮಾನವೆಂದು ಆಸ್ತಿ–ಹೊಣೆ ತಃಖ್ತೆಯಲ್ಲಿ, ತೋರಿಸುತ್ತಿದ್ದ ಬ್ಯಾಂಕುಗಳು ಈ ಸಂತೃಪ್ತ ಧೋರಣೆಯನ್ನು ತೊರೆಯಬೇಕಾಯಿತು. ವಸೂಲಾಗ ಬೇಕಿದ್ದ ಬಡ್ಡಿಯಲ್ಲಿ ಯಾವುದು ಗಟ್ಟಿ, ಯಾವುದು ಜಳ್ಳು ಎಂಬು ದನ್ನು ಪತ್ತೆ ಹಚ್ಚಿ, ಗಟ್ಟಿ ಕಾಳನ್ನು ಮಾತ್ರ ಲಾಭವೆಂದು ಪರಿಗಣಿ ಸುವುದು ಸಾಧ್ಯವಾಗುವಂತೆ ವಿವೇಚನಾಯುತವಾದ ಮಾನ ಗಳನ್ನು (ನಾರ್ಮ್) ಅನುಸರಿಸಬೇಕಾಯಿತು. ಕರಡು ಹಾಗೂ ಅನುಮಾನ ಋಣಗಳಿಗೆ ಉಪಬಂಧ ಮಾಡಲು ಸೂತ್ರಗಳು ಜಾರಿಗೆ ಬಂದುವು. ಉತ್ಪ್ರೇಕ್ಷೆ ತಪ್ಪಿತು. ಬೊಜ್ಜು ಕರಗಿತು. ಅನೇಕ ಬ್ಯಾಂಕುಗಳ ತಳಗಳು ತಾತ್ಕಾಲಿಕವಾಗಿ ಕೆಂಪು ಅಕ್ಷರಗಳಿಂದ ಕೂಡಿ ದುವು. ತಳ್ಳಗೆ ಬಳಕುವ, ಸ್ಪರ್ಧಾತ್ಮಕವಾದ, ಆರೋಗ್ಯಕರವಾದ ಬ್ಯಾಂಕಿಂಗ್ ಸಂಸ್ಥೆಗಳೇ ನರಸಿಂಹಂ ಸಮಿತಿಯ ಕನಸು.

### ಸಮಸ್ಯೆಗಳು

ಆದರೆ ನರಸಿಂಹಂ ಸಮಿತಿಯ ಎಲ್ಲ ಸಲಹೆಗಳನ್ನೂ ಕಾರ್ಯ ರೂಪಕ್ಕೆ ತರುವ ಪ್ರಯತ್ನವನ್ನು ರಿಸರ್ವ್ ಬ್ಯಾಂಕಾಗಲಿ ಸರ್ಕಾರ ವಾಗಲಿ ಮಾಡಲಿಲ್ಲ. ದೇಶದಲ್ಲಿ ಬ್ಯಾಂಕುಗಳ ಸಂಖ್ಯೆಯನ್ನು ನಿಗದಿ ಗೊಳಿಸಿ, ಅಂತರರಾಷ್ಟ್ರೀಯ, ರಾಷ್ಟ್ರೀಯ ಹಾಗೂ ಸ್ಥಳೀಯ ಮತ್ತು ಗ್ರಾಮೀಣ ಎಂಬ ಸ್ತರಗಳಲ್ಲಿ ಕೆಲಕೆಲವು ಬ್ಯಾಂಕುಗಳು ಕಾರ್ಯನಿರತವಾಗುವಂತೆ ಅವುಗಳನ್ನು ಪುನರ್ರಚಿಸುವ ಬಗ್ಗೆ ಯಾವುದೇ ಪ್ರಯತ್ನ ಮಾಡಲಿಲ್ಲ. ಬ್ಯಾಂಕುಗಳು ಸಂಪೂರ್ಣವಾಗಿ ಸ್ವಯಂ ಆಡಳಿತ ಸಂಸ್ಥೆಗಳಾಗಲಿಲ್ಲ. ಬಂಡವಾಳಪರ್ಯಾಪ್ತತೆ ಯನ್ನು ಸಾಧಿಸುವ ಸಲುವಾಗಿ ಕೆಲವು ಬ್ಯಾಂಕುಗಳು ಸಾರ್ವಜನಿಕ ರಿಗೆ ಷೇರುಗಳನ್ನು ನೀಡಿ ಬಂಡವಾಳ ಸಂಗ್ರಹಿಸಿವೆ. ಈ ಪ್ರಕ್ರಿಯೆ ಸಂಪೂರ್ಣವಾಗಿಲ್ಲ. ಇನ್ನೂ ಕೆಲವು ತೊಡಕುಗಳಿವೆ.

ಕೆಲವು ಸಮಸ್ಯೆಗಳೂ ತಲೆದೋರಿವೆ. ಹಣಕಾಸು ವಹಿವಾಟು ಗಳ ಉದಾರೀಕರಣ, ದೇಶೀಯ ಮಾರುಕಟ್ಟೆಗಳ ವಿಮೋಚನೆ, ವಿದೇಶೀ ಮಾರುಕಟ್ಟೆಗಳೊಡನೆ ಸಂಯೋಜನೆ, ವಿದೇಶೀ ಬ್ಯಾಂಕುಗಳ ಆಗಮನ, ಕಂಪ್ಯೂಟರೀಕರಣ, ಹಣಕಾಸು ವ್ಯವಹಾರ ಕುರಿತ ಮಾಹಿತಿಯ ಸ್ಫೋಟ, ಹಣಕಾಸುಗಳ ವ್ಯವಹಾರಕ್ಕೆ ಸಂಬಂಧಿಸಿದಂತೆ ನಷ್ಟಸಂಭಾವ್ಯತೆಯ ಹೆಚ್ಚಳ—ಇವೆಲ್ಲ ಈಗ ಅಕರಾಳ ವಿಕರಾಳ ರೂಪ ಹಾಗೂ ಗಾತ್ರಗಳನ್ನು ತಳೆಯುತ್ತಿವೆ. ಉದರಿ ಮತ್ತು ಮಾರುಕಟ್ಟೆ ನಷ್ಟಸಂಭಾವ್ಯತೆ, ಬಡ್ಡಿ ದರ ಕುರಿತಂತೆ ನಷ್ಟಸಂಭಾವ್ಯತೆ, ಬೆಲೆಗಳಿಗೆ ಸಂಬಂಧಿಸಿದಂತೆ ನಷ್ಟಭಯ, ವಿದೇಶೀ ವಿನಿಮಯ ಕ್ಷೇತ್ರದಲ್ಲಿ ಗಂಡಾಂತರದ ಭಯ, ದ್ರವತ್ವ ಸಂಬಂಧಿತ ನಷ್ಟಭಯ—ಇವನ್ನೆಲ್ಲ ನಮ್ಮ ಬೃಹತ್ ಬ್ಯಾಂಕು ಗಳು ಇಂದು ಎದುರಿಸಬೇಕಾಗಿದೆ. ತಳ್ಳಗೆ, ಬೆಳ್ಳಗೆ ಬಳಕುವ ವಿದೇಶಿ ಬ್ಯಾಂಕುಗಳೂ, ಖಾಸಗಿ ವಲಯದ ಬ್ಯಾಂಕುಗಳೂ ಭಾರೀ ಸವಾಲು ಒಡ್ಡಿವೆ. ನಮ್ಮ ಡಿನೋಸಾರ್‌ಸದೃಶ ಬ್ಯಾಂಕುಗಳು ಎಲ್ಲಿಗೆ ಹೋಗಬೇಕಾದರೂ ಅವಕ್ಕೆ ರಾಜಮಾರ್ಗ ಬೇಕು. ರಾಜರು —ಅರ್ಥಾತ್ ರಾಜಕೀಯ—ನಾಯಕರು ಅವುಗಳ ಮಾರ್ಗವನ್ನು ಇನ್ನೂ ಸುಲಭವಾಗಿ ಮಾಡಿಲ್ಲ. ಗ್ರಾಮೀಣ ಹಣಕಾಸಿನ ಸಮಸ್ಯೆ ಯಂತೂ ಇದ್ದೇ ಇದೆ.

ನರಸಿಂಹಂ ಸಮಿತಿಯ ಶಿಫಾರಸುಗಳಿಗೆ ಅನುಗುಣವಾಗಿರದ ಒಂದು ಬೆಳವಣಿಗೆಯನ್ನು ನಾವು ಇಂದು ನಿರೀಕ್ಷಿಸಬಹುದು. ಸರ್ಕಾರ ಘೋಷಿಸಿದ ಸ್ಥಳೀಯ ಕ್ಷೇತ್ರದ ಖಾಸಗಿ ಬ್ಯಾಂಕುಗಳ ಯೋಜನೆಯೊಂದು ಬ್ಯಾಂಕಿಂಗ್ ವಲಯದಲ್ಲಿ ಕಾಣಿಸಿಕೊಂಡಿದೆ. ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಶಾಖೆಗಳ ಜೊತೆಗೆ ಬರಲಿರುವ ಸ್ಥಳೀಯ ಕ್ಷೇತ್ರ ಬ್ಯಾಂಕುಗಳು ಯಾವ ರೀತಿ ವ್ಯವಹರಿಸುತ್ತವೆ, ಹೇಗೆ ಲಾಭಪ್ರದವಾಗಿ ನಿಂತು ಬೆಳೆಯುತ್ತವೆ—ಎಂಬುದೊಂದು ಪ್ರಶ್ನೆ. ಏನಾದರೊಂದು ಮಾಡಿ ಸೈ ಎನ್ನಿಸಿಕೊಳ್ಳಬೇಕೆಂಬುದು ಸರ್ಕಾರದ ಆಶಯ. ಈ ವಿಚಿತ್ರ ಪ್ರಯೋಗ ಫಲಪ್ರದವಾದರೆ ಸಂತೋಷ.

ಮತ್ತೆ ನಾವು ಇಂದು ಕವಲು ದಾರಿಯ ಬಳಿಗೆ ಬಂದು ನಿಂತಿ ದ್ದೇವೆ. ಸುಧಾರಣೆಯ ಮೊದಲ ಮಜಲು ಹೆಚ್ಚು ಕಡಮೆ ಮುಗಿ

ದಿದೆ. ಅದನ್ನು ಇನ್ನೊಂದು ಮಜಲು ಮುಂದಕ್ಕೆ ಕೊಂಡೊಯ್ಯ ಬೇಕಾಗಿದೆ. ರಾಜಕೀಯ ಅಸ್ಥಿರತೆಯ ನಡುವೆ ಇದು ಹೇಗೆ ಸಾಗು ವುದೆಂಬುದನ್ನು ನೋಡಬೇಕಾಗಿದೆ. ಇದಕ್ಕೆ ಬ್ಯಾಂಕುಗಳೇ ನಾಂದಿ ಹಾಡಬೇಕಾಗಿದೆ. ಹೊಸಹೊಸ ಅವಕಾಶಗಳನ್ನು ಆವಿಷ್ಕಾರ ಗೊಳಿಸುವುದು ಇಂದಿನ ಅಗತ್ಯ. ಹೊಸ ತಂತ್ರಜ್ಞಾನವೇ ಇದಕ್ಕೆ ಬೇಕಾಗಿರುವ ಉಪಾಯ. ಹೊಸಹೊಸ ಕ್ಷೇತ್ರಗಳಲ್ಲಿ ಹೊಸ ಹೊಸ ರೀತಿಯ ಸೇವೆಗಳನ್ನು ಹೆಚ್ಚುಹೆಚ್ಚು ಪರಿಣಾಮಕಾರಿ ಯಾಗಿ ನೀಡಲು ಏನು ಮಾಡಬೇಕೆಂಬುದು ಪ್ರಶ್ನೆ. ಸಾಮಾನ್ಯರ ಬಳಿಗೆ ಬ್ಯಾಂಕಿಂಗ್ ಸೇವೆಯನ್ನು ಕೊಂಡೊಯ್ಯುವ ಹಾದಿಯಲ್ಲಿ ಅದರ ತುದಿ ಮುಟ್ಟಬೇಕಾಗಿದೆ. ಹೊಸಹೊಸ ಉತ್ಪನ್ನಗಳನ್ನು ರೂಪಿಸುವುದು ಅತ್ಯವಶ್ಯ. ಹೊಸ ಮಾರುಕಟ್ಟೆ ವಲಯಗಳ ಅನ್ವೇಷಣೆ ನಡೆಸಬೇಕಾಗಿದೆ. ಮಧ್ಯಸ್ಥಿಕೆಯ ಕಾರ್ಯಭಾರ ವನ್ನಷ್ಟೇ ನಡೆಸುತ್ತಿದ್ದ ಬ್ಯಾಂಕು ಈಗ ಅದನ್ನು ಬಿಟ್ಟುಕೊಡ ಬೇಕಾಗಿದೆ. ಅದಕ್ಕೆ ಚ್ಯುತಿ ಬಂದಿದೆ. ಅದು ಹೊಸ ಮೇವುಗಳನ್ನ ಅರಸುವುದು ಅನಿವಾರ್ಯ. ಸ್ಥೂಲಕಾಯದಿಂದ ಕೂಡಿದ ನಮ್ಮ ಸಾರ್ವಜನಿಕ ವಲಯ ಬ್ಯಾಂಕುಗಳು ವಿದೇಶಿ ಹಾಗೂ ಖಾಸಗಿ ವಲಯದ ಬ್ಯಾಂಕುಗಳೊಡನೆ ಸ್ಪರ್ಧಿಸುವುದು ಕಷ್ಟವೆನಿಸು ತ್ತಿದೆ. ಹೀಗಾಗಿ, ನರಸಿಂಹಂ ಸಮಿತಿ ಸೂಚಿಸಿದಂತೆ ಬ್ಯಾಂಕಿಂಗ್ ವ್ಯವಸ್ಥೆಯ ಪುನಸ್ಸಂರಚನೆ ಅತ್ಯಂತ ಜರೂರು ಎನಿಸಿದೆ.

## ಉದ್ಯೋಗಿಗಳ ಸಮಸ್ಯೆ

ಈ ಎಲ್ಲ ಬದಲಾವಣೆಗಳ ಕೋಲಾಹಲದ ನಡುವೆ ಬ್ಯಾಂಕ್ ಉದ್ಯೋಗಿಗಳು ಎಲ್ಲಿದ್ದಾರೆ? ಇದು ಈಗ ವಿವೇಚಿಸಬೇಕಾದ ಇನ್ನೊಂದು ಮುಖ್ಯ ಪ್ರಶ್ನೆ. ಬ್ಯಾಂಕ್ ಉದ್ಯೋಗಿಗಳೂ ಈಗ ಕವಲುದಾರಿಯಲ್ಲಿದ್ದಾರೆ. ಅವರು ತಮ್ಮ ಚಿಂತನೆಯ ಮಾರ್ಗ ವನ್ನು, ಕಾರ್ಯವಿಧಾನಗಳನ್ನು ಬದಲಾಯಿಸಿಕೊಳ್ಳುವುದು ಅಗತ್ಯ ವೇನೋ ಎನಿಸಿದೆ.

ಉದ್ಯೋಗಿಗಳು ಎದುರಿಸುತ್ತಿರುವ ಕೆಲವು ಸಮಸ್ಯೆಗಳನ್ನು ಇಲ್ಲಿ ಸ್ಥೂಲವಾಗಿ ನಿರೂಪಿಸಬಹುದು. ಬ್ಯಾಂಕುಗಳು ತೆಳ್ಳಗೆ, ಬಳಕು ವಂತೆ, ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸುವಂತೆ ಮಾಡಲು ಯತ್ನಿಸಲಾಗುತ್ತಿದೆ. ಹೆಚ್ಚುವರಿ ಉದ್ಯೋಗಿಗಳನ್ನು ನಿವಾರಿಸಿ ಕೊಳ್ಳುವ ಮಾತೂ ಕೇಳಿ ಬರುತ್ತಿದೆ. ಇಡೀ ಅರ್ಥವ್ಯವಸ್ಥೆಗೆ, ಉದ್ಯಮ ಪ್ರಪಂಚಕ್ಕೆ, ಸಂಬಂಧಿಸಿದಂತೆ ಕೇಳಿಬರುತ್ತಿರುವ ಮಾತೆಂ ದರೆ, "ಹೊನ್ನು ಕೊಟ್ಟು ಕೈಕುಲುಕಿ ಕಳಿಸುವುದು;" ಉದ್ಯೋಗಿ ಗಳು ತಾವಾಗಿಯೇ ನಿವೃತ್ತಿ ಪಡೆಯಬಯಸಿ, ಇದಕ್ಕೆ ಪ್ರತಿಯಾಗಿ ನೀಡಲಾಗುವ ಪರಿಹಾರ ಮತ್ತು ಇತರ ಬಳುವಳಿಗಳನ್ನು ಪಡೆದು ನಿರ್ಗಮಿಸುವುದು ಅತಿರಿಕ್ತ; ಉದ್ಯೋಗಿಗಳ ಪುನರ್ನೇಮಕಕ್ಕೆ, ಹೊಸ ಬಗೆಯ ಕೆಲಸಗಳಲ್ಲಿ ಅವರನ್ನು ತೊಡಗಿಸುವುದಕ್ಕೆ ಅಗತ್ಯ ವಾದ ತರಬೇತಿ ನೀಡುವುದು; ಇದಕ್ಕಾಗಿ ರಾಷ್ಟ್ರೀಯ ಪುನರ್ನವೀ ಕರಣ ನಿಧಿಯ ರಚನೆ. ಇಂಥ ಮಾತುಗಳು ಗಾಳಿಯಲ್ಲಿ ತೂರಾಡು ತ್ತಿವೆ. ಕೆಲವು ಬ್ಯಾಂಕುಗಳು ತಮ್ಮ ಉದ್ಯೋಗಿಗಳ ಹೆಚ್ಚು ವೇತನದ ಬೇಡಿಕೆಯನ್ನು ಪೂರೈಸಲಾಗದೆ ಅದನ್ನು ಸ್ಥಗಿತ ಗೊಳಿಸುವ ಮಾತನ್ನೂ ಆಡುತ್ತಿವೆ. ಗ್ರಾಮೀಣ ಬ್ಯಾಂಕ್ ಉದ್ಯೋಗಿಗಳ ವೇತನ ಕುರಿತ ಒಪ್ಪಂದವನ್ನು ಜಾರಿಗೊಳಿಸು ವಲ್ಲಿ ತೊಡಕುಂಟಾಗಿದೆ. ಮುಷ್ಕರಗಳಲ್ಲಿ ಭಾಗವಹಿಸುವವರ ಪೆನ್ಶನ್ ನೀಡಬಾರದೆಂಬ ಸೂಚನೆಯೂ ಬಂದದ್ದುಂಟು. ಒಟ್ಟಿನಲ್ಲಿ ಚೆನ್ನಾಗಿ ಕೆಲಸ ಮಾಡುವ ಬ್ಯಾಂಕುಗಳಿಗೆ ಚಿಂತೆಯಿಲ್ಲ. ಅಷ್ಟು ಅದೃಷ್ಟ ಹೊಂದಿಲ್ಲದ ಬ್ಯಾಂಕುಗಳೂ ಅವುಗಳ ನೌಕರರೂ ಶಿಕ್ಷೆ ಅನುಭವಿಸಬೇಕಾದ ವಿಚಿತ್ರ ಪರಿಸ್ಥಿತಿ ತಲೆದೋರಿದೆ.

ಬ್ಯಾಂಕುಗಳಲ್ಲಿಯ ಉನ್ನತ ಹುದ್ದೆಗಳನ್ನು ತುಂಬುವ ವಿಚಾರ ವಾಗಿಯೂ ಸ್ಪಷ್ಟ ಖಚಿತ ನೀತಿಯನ್ನು ರೂಪಿಸಿಲ್ಲ. ಕೆಳಗಿನ ಸ್ತರ ಗಳ ಅಧಿಕಾರಿಗಳು ಅತ್ಯುನ್ನತ ಸ್ತರವನ್ನು ತಲಪಲು ಅಡಚಣೆ ಇರದಿದ್ದಾಗ ಅವರ ಭವಿಷ್ಯ ಆಶಾದಾಯಕ. ಅಂಥ ಆಶಾವಾದಿ ಉದ್ಯೋಗಿಗಳೇ ಸಂಸ್ಥೆಯ ಸಂಪತ್ತು. ಆದರೆ ಇಂಥ ವಾತಾವರಣ ಸೃಷ್ಟಿಯಾಗುವಂತೆ ಕಾಣುತ್ತಿಲ್ಲ.

ಒಟ್ಟಿನಲ್ಲಿ ಉದ್ಯೋಗಿಗಳು ನಾನಾ ಬಗೆಯ ಒತ್ತಡಗಳಿಗೆ ಗುರಿಯಾಗಿದ್ದಾರೆ. ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವಲ್ಲಿ ಸಾರ್ವಜನಿಕರ ಸಹಾನುಭೂತಿಯನ್ನು ಕಳೆದುಕೊಳ್ಳದಂತೆ ಅವರು ಎಚ್ಚರಿಕೆ ವಹಿಸಬೇಕಾಗಿದೆ. ಗ್ರಾಹಕಸೇವೆಗೆ ಹೆಚ್ಚಿನ ಮಹತ್ವ ನೀಡಬೇಕಾದ್ದು ಅಗತ್ಯ. ಗೋಯಿಪೂರಿಯ ಸಮಿತಿಯ ಶಿಫಾರಸು ಗಳನ್ನು ಜಾರಿಗೊಳಿಸುವುದು ಬಾಯಲ್ಲಿ ಹೇಳುವಷ್ಟು ಸುಲಭ ವಲ್ಲ. ಬ್ಯಾಂಕಿಂಗ್ ಸೇವೆಗೆ ನಾನಾ ಮುಖ. ಎತ್ತೆತ್ತಲೂ ಅದಕ್ಕೆ ಬಾಗಿಲು. ಪಾರದರ್ಶಕತೆ ಅತ್ಯಂತ ಮುಖ್ಯ. ಯಾಂತ್ರೀಕರಣ, ಗಣಕೀಕರಣ ಪ್ರಕ್ರಿಯೆ ಒಂದು ಕಡೆ. ಶೀಘ್ರ ಸಮರ್ಥ ಯಾಂತ್ರೀ ಕೃತ ಸೇವೆಯನ್ನು ನೀಡುವಾಗ ವ್ಯಕ್ತಿಗತ ಆಸಕ್ತಿ, ಆತ್ಮನಿಷ್ಠೆ ನಷ್ಟ ವಾಗುತ್ತದೆ. ವ್ಯಕ್ತಿಗತ ಸೇವೆಗೆ ಪ್ರಾಮುಖ್ಯ ನೀಡುವಾಗ ಕ್ಷಿಪ್ರ, ಸಮರ್ಥ ದಕ್ಷ ಸೇವೆ ಮುಕ್ಕಾಗುವ ಭಯವಿರುತ್ತದೆ. ಉದ್ಯೋಗಿ ಗಳಿಗೆ ಹೀಗೆ ಇಬ್ಬಗೆಯ ಆತಂಕ—ಹೋಗುತ್ತಲೂ ಕೊಯ್ಯುವ, ಬರುತ್ತಲೂ ಕೊಯ್ಯುವ ಗರಗಸದ ಹಾಗೆ.

ಇಂಥ ಪರಿಸರದಲ್ಲಿ ನಮ್ಮ ಬ್ಯಾಂಕಿಂಗ್ ಕ್ಷೇತ್ರದ ಸುಧಾರಣೆಯ ಎರಡನೆಯ ಮಜಲನ್ನು ಸಾಧಿಸಬೇಕಾಗಿದೆ. ಇದಕ್ಕಾಗಿ ತೀವ್ರ ಚಿಂತನೆ ನಡೆದಿದೆ. ಬೇಗ ಇದನ್ನು ಕಾರ್ಯರೂಪಕ್ಕೆ ತರುವುದು ಅಗತ್ಯ.

ಎಚ್ಚೆಸ್ಕೆ

# ಉದ್ಯಮ ಸಂಪನ್ಮೂಲ ಯೋಜನೆ

**ಜಿ. ಎಸ್. ರವೀಂದ್ರ**

ಭಾರತೀಯ ಸ್ಟೇಟ್ ಬ್ಯಾಂಕ್, ವಿ.ವಿ.ಪುರಂ ಶಾಖೆ, ಬೆಂಗಳೂರು 4

**ತೀವ್ರವಾಗಿ ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಉದ್ಯಮವೊಂದು ಯಶಸ್ವಿಯಾಗಿ ಕಾರ್ಯ ನಿರ್ವಹಿಸಬೇಕಾದರೆ ಸಮಗ್ರವಾದ ಮಾಹಿತಿ ಪೂರೈಕೆಯ ವ್ಯವಸ್ಥೆ ಅತ್ಯಗತ್ಯ. ಮಾಹಿತಿ ವಿನಿಮಯ ಹಾಗೂ ವಿಶ್ಲೇಷಣೆಗೆ ಪೂರಕವಾದ ಒಂದು ಸಂರಚನೆಯ ಅಗತ್ಯವನ್ನು ಎಂದಿಗಿಂತ ಇಂದು ಹೆಚ್ಚಾಗಿ ಮನಗಾಣಲಾಗಿದೆ. ಉದ್ಯಮ ಸಂಪನ್ಮೂಲ ಯೋಜನೆಯೆಂಬ ಸಮಗ್ರ ವ್ಯವಸ್ಥೆಯೊಂದು ರೂಪುಗೊಂಡಿದೆ.**

ಕಳೆದ ಐದು ವರ್ಷಗಳಲ್ಲಿ ಉದ್ಯಮ ರಂಗದಲ್ಲಿ ಆಗಿರುವಷ್ಟು ಬೆಳವಣಿಗೆ ಪ್ರಾಯಶಃ ಹಿಂದಿನ 5 ದಶಕಗಳಲ್ಲೂ ಆಗಿರಲಿಲ್ಲ. ಬ್ಯಾಂಕಿಂಗ್ ಉದ್ಯಮವಾಗಲಿ, ಕೈಗಾರಿಕೋದ್ಯಮವಾಗಲಿ, ಬೇರೆ ಯಾವುದೇ ಉದ್ಯಮವಾಗಲಿ ಸತತವಾಗಿ ಬದಲಾವಣೆಯನ್ನು ಕಾಣುತ್ತಿರುವುದು ಇತ್ತೀಚಿನ ದಿನಗಳಲ್ಲಷ್ಟೆ. ಬದಲಾವಣೆ, ಪೈಪೋಟಿ, ಬೆಳವಣಿಗೆ, ಹೊಸ ತಂತ್ರಜ್ಞಾನ ಎಲ್ಲವನ್ನೂ ಮೈಗೂಡಿಸಿಕೊಂಡು ಮುಂದುವರಿಯಬೇಕಾಗಿರುವುದು ಇಂದಿನ ಉದ್ಯಮಗಳ ವಿಶೇಷತೆ. ಈ ಚಲನಶೀಲತೆ ಇನ್ನೊಂದು ದಶಕದವರೆಗಾದರೂ ಇರುವುದರಲ್ಲಿ ಸಂದೇಹವಿಲ್ಲ. ಈ ಪರಿಸ್ಥಿತಿಯಲ್ಲಿ ಉದ್ಯಮಗಳು ಪುನಶ್ಚೇತನಗೊಂಡು ಸತ್ವಶಾಲಿಗಳಾಗದಿದ್ದರೆ, ಹೊಸ ಶೋಧನೆಗಳಲ್ಲಿ ತೊಡಗಿಸಿಕೊಳ್ಳದಿದ್ದರೆ, ಹೊಸ ತಂತ್ರಜ್ಞಾನಕ್ಕೆ ಸ್ಪಂದಿಸದಿದ್ದರೆ 21ನೆಯ ಶತಮಾನದ ಮಾರುಕಟ್ಟೆಯಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ.

ಗ್ರಾಹಕನ ಹೊಸ ಅಗತ್ಯಗಳನ್ನು ಪೂರೈಸುತ್ತಾ, ಮಾರುಕಟ್ಟೆಯಲ್ಲಿ ಲಭ್ಯವಿರುವ ಅವಕಾಶವನ್ನು ತನ್ನದಾಗಿಸಿಕೊಳ್ಳುವ ಜಾಣ್ಮೆಯಲ್ಲಿ ಉದ್ಯಮಗಳ ಅಳಿವು-ಉಳಿವಿನ ಪ್ರಶ್ನೆ ಅಡಗಿದೆ. ಇಂದಿನ ಸ್ಥಿತಿಯಲ್ಲಿ ಉದ್ಯಮಗಳು ಸಫಲವಾಗಬೇಕಾದರೆ—

- ಅ ಉದ್ಯಮದ ಎಲ್ಲಾ ವಿಭಾಗಗಳ ನಡುವೆ ಸಂಪರ್ಕವಿದ್ದು, ಮಾಹಿತಿ ವಿನಿಮಯ ಸಮರ್ಪಕವಾಗಿರಬೇಕಾಗುತ್ತದೆ.
- ಆ ಗುಣಮಟ್ಟ, ಗ್ರಾಹಕ ಸೇವೆ, ಲಾಭಗಳಿಕೆ, ಸಿಬ್ಬಂದಿ ಕ್ಷೇಮ ಈ ಎಲ್ಲಾ ಅಂಶಗಳತ್ತಲೂ ಜಾಗರೂಕತೆಯಿಂದಿರಬೇಕಾಗುತ್ತದೆ.
- ಇ ಮಾರುಕಟ್ಟೆಗೆ ತಕ್ಕಂತೆ ತನ್ನ ಸಂರಚನೆಯಲ್ಲಿ ಸುಧಾರಣೆ ಮಾಡಿಕೊಳ್ಳುತ್ತಾ ಹೊಸ ಉತ್ಪನ್ನಗಳನ್ನು ಕೊಡಬೇಕಾಗುತ್ತದೆ.

**ಮಾಹಿತಿಯ ಪ್ರಾಮುಖ್ಯ**

ಈ ಎಲ್ಲದರ ಮೂಲ ಹಾಗೂ ಮುಖ್ಯ ಕೊಂಡಿಯೆಂದರೆ ಮಾಹಿತಿ. ಮಾಹಿತಿಯನ್ನಾಧರಿಸಿಯೇ ಎಲ್ಲ ತೀರ್ಮಾನಗಳನ್ನು ತೆಗೆದುಕೊಳ್ಳುವುದರಿಂದ ಇದು ಒಂದು ಉದ್ಯಮದ ಭವಿಷ್ಯವನ್ನೇ ನಿರ್ಧರಿಸುವಷ್ಟು ಶಕ್ತಿಶಾಲಿ.

ಕಳೆದ ಐದು ದಶಕಗಳ ಹಿಂದೆ ಮಾಹಿತಿಗೆ ಹೆಚ್ಚಿನ ಒತ್ತು ಇರಲಿಲ್ಲ. ಮಾಹಿತಿ ವಿನಿಮಯ ಹಾಗೂ ವಿಶ್ಲೇಷಣೆಗೆ ಪೂರಕವಾದ ಒಂದು ಸಂರಚನೆಯೇ ಇರಲಿಲ್ಲ. ಗಣಕಗಳ ಪ್ರವೇಶದಿಂದ ಈ ಕೊರತೆ ದೂರವಾಯಿತೆನ್ನಬಹುದು. ಉದ್ಯಮಗಳು ಕಂಪ್ಯೂಟರ್‌ಗಳನ್ನು ತಮ್ಮ ಪ್ರಮುಖ ಕಾರ್ಯಭಾರಾತ್ಮಕ ಕ್ಷೇತ್ರಗಳಲ್ಲಿ ಅಳವಡಿಸಿಕೊಳ್ಳುವ ಒಂದು ವ್ಯವಸ್ಥೆ ಜಾರಿಗೆ ಬಂದಿತು. ಮಾಹಿತಿ ಪ್ರಸರಣ ಇದರಿಂದ ಸುಲಭವಾಯಿತು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಈ ವ್ಯವಸ್ಥೆಯಲ್ಲಿಯೂ ನ್ಯೂನತೆಗಳಿರುವುದು ಉದ್ಯಮ ರಂಗದ ವ್ಯವಸ್ಥಾಪನ ವರ್ಗದ ಅನುಭವಕ್ಕೆ ಬಂತು. ಬಹಳ ಮುಖ್ಯವಾಗಿ—

- ಅ ಕಂಪ್ಯೂಟರ್‌ಗಳನ್ನು ಉದ್ಯಮದ ಪ್ರತಿಯೊಂದು ವಿಭಾಗದಲ್ಲೂ ಪ್ರತ್ಯೇಕವಾಗಿ ಅಳವಡಿಸಿಕೊಂಡಿದ್ದರಿಂದ ಸಕಾಲದಲ್ಲಿ ಇಡೀ ಉದ್ಯಮದ ಬಗ್ಗೆ ಮಾಹಿತಿಯ ಕ್ರೋಡೀಕರಣ ಕಷ್ಟವಾಗುತ್ತಿತ್ತು.
- ಆ ಉದ್ಯಮ ತನ್ನ ವ್ಯವಹಾರದ ಸ್ವರೂಪದಲ್ಲಿ ಬದಲಾವಣೆಯನ್ನು ಅಳವಡಿಸಿಕೊಂಡರೆ ಕಂಪ್ಯೂಟರ್‌ನ ಕಾರ್ಯವಿಧಾನದ ವ್ಯವಸ್ಥೆಯನ್ನೇ ಬದಲಾಯಿಸಬೇಕಾಗುತ್ತಿತ್ತು.

ಹೊರಗಿನ ಮಾರುಕಟ್ಟೆಯ ಸ್ಥಿತಿ-ಗತಿಗಳಿಗೆ ಸ್ಪಂದಿಸಿ ಬದಲಾವಣೆಯನ್ನು ಮಾಡಿಕೊಳ್ಳಬೇಕಾದರೆ ತನ್ನ ಮಾಹಿತಿ ಸಂರಚನೆಗಾಗಿ

ಮಾಡಿಕೊಂಡ ಗಣಕಗಳ ವ್ಯವಸ್ಥೆಯನ್ನೇ ಬದಲಾಯಿಸುವುದಕ್ಕೆ ಅಪಾರ ಪರಿಶ್ರಮ, ಹಣ ವ್ಯರ್ಥವಾಗಿ ಬಳಕೆಯಾಗುತ್ತಿತ್ತು.

ಈ ನ್ಯೂನತೆಗಳನ್ನು ಸರಿಪಡಿಸಿ ಉದ್ಯಮರಂಗ ಅತ್ಯಂತ ಶಕ್ತವಾಗಿ ಕಾರ್ಯ ನಿರ್ವಹಿಸಲು ಸಹಕಾರಿಯಾಗುವಂತೆ ನಿರ್ಮಿಸಲಾದ ಒಂದು ಹೊಸ ವ್ಯವಸ್ಥೆಯೇ ಉದ್ಯಮ ಸಂಪನ್ಮೂಲ ಯೋಜನೆ. ಗಣಕಗಳ ಸಾರ್ಥಕ ಬಳಕೆಯಿಂದ ಅಳವಡಿಸಿಕೊಳ್ಳಬಹುದಾದ ಈ ಉದ್ಯಮ ಸಂಪನ್ಮೂಲ ಯೋಜನೆಯ ಬಹಳ ಮುಖ್ಯ ಅಂಶಗಳೆಂದರೆ—

ಅ ಈ ಯೋಜನೆ ಇಡೀ ಉದ್ಯಮವನ್ನೆ ಒಂದು ಘಟಕವನ್ನಾಗಿ ಪರಿಭಾವಿಸುವುದು.

ಆ ಉದ್ಯಮದ ಪ್ರತಿಯೊಂದು ವಿಭಾಗದೊಡನೆ—ಆ ವಿಭಾಗಗಳು ಎಲ್ಲೇ ಇರಲಿ—ಸಂಪರ್ಕವಿರಿಸಿಕೊಂಡು ಮಾಹಿತಿ ಪಡೆಯುವುದು

ಇ ದತ್ತಾಂಶಗಳ ಕ್ರೋಡೀಕರಣ ಮತ್ತು ವ್ಯವಸ್ಥಾಪನ ವರ್ಗ ತನಗೆ ಬೇಕಾದ ಮಾಹಿತಿಯನ್ನು ಕ್ಷಣದಲ್ಲೇ ಪಡೆಯಬಹುದಾದ ಸೌಲಭ್ಯ.

## ಸರ್ವಗ್ರಾಹಿ ವ್ಯವಸ್ಥೆ

ಉದ್ಯಮ ಸಂಪನ್ಮೂಲ ಯೋಜನೆಯ ವ್ಯವಸ್ಥೆ ಎಲ್ಲವನ್ನೂ ಒಳಗೊಂಡಿರುತ್ತದೆ. ಉದ್ಯಮದ ಗ್ರಾಹಕರ ಮಾಹಿತಿ, ಹಣಕಾಸಿನ ಮಾಹಿತಿ, ಮಾನವ ಸಂಪನ್ಮೂಲದ ಮಾಹಿತಿ, ಮಾರುಕಟ್ಟೆಯ ಸ್ಥಿತಿ-ಗತಿಗಳ ಬಗ್ಗೆ ಮಾಹಿತಿ ಇತ್ಯಾದಿ. ಪ್ರತಿಯೊಂದು ವಿಭಾಗದಲ್ಲೂ ಇನ್ನೂ ಅನೇಕ ವಿವರಗಳ ವಿಶ್ಲೇಷಣೆ ಇರುತ್ತದೆ. ಉದಾಹರಣೆಗೆ ಹಣಕಾಸಿನ ವಿಭಾಗದಲ್ಲಿ—

(1) ಹಣಕಾಸಿನ ಲೆಕ್ಕ, (2) ಖಜಾನೆ ವ್ಯವಸ್ಥಾಪನೆ, (3) ಆಸ್ತಿ-ಹೊಣೆ ವ್ಯವಸ್ಥಾಪನೆ—ಇತ್ಯಾದಿ ಸೂಕ್ಷ್ಮ ವಿವರಗಳೂ ಇವೆ. ಉದ್ಯಮ ಸಂಪನ್ಮೂಲ ಯೋಜನೆಯನ್ನು ಒಂದು ಉದ್ಯಮ ಅಳವಡಿಸಿಕೊಳ್ಳಲು ತೀರ್ಮಾನಿಸಿದಾಗ ಆ ಉದ್ಯಮಕ್ಕೆ ಸಂಬಂಧಿಸಿದಂತೆ ಎಲ್ಲಾ ವಿವರಗಳನ್ನೂ ಕಲೆಹಾಕಿ, ಅಭ್ಯಾಸಮಾಡಿ ಆ ಉದ್ಯಮದ ಯಶಸ್ವಿ ನಿರ್ವಹಣೆಗೆ ತಂತ್ರಾಂಶವನ್ನು ರೂಪಿಸಲಾಗುತ್ತದೆ. ಜೊತೆಗೆ ಸರಿಹೊಂದುವ ಸೂಕ್ತ ಯಂತ್ರಾಂಶವನ್ನು ಗುರುತಿಸಿ ಒಂದು ಹೊಸ ವ್ಯವಸ್ಥೆಯನ್ನು ಯೋಜಿಸಲಾಗುತ್ತದೆ.

## ಬ್ಯಾಂಕಿಂಗ್ ಉದ್ಯಮದಲ್ಲಿ ಉದ್ಯಮ ಸಂಪನ್ಮೂಲ ಯೋಜನೆ

ಉದ್ಯಮ ಸಂಪನ್ಮೂಲ ಯೋಜನೆಯನ್ನು ಅತಿ ಹೆಚ್ಚಾಗಿ ಅಳವಡಿಸಿಕೊಂಡಿರುವುದು ಕಾರ್ಖಾನೆಗಳಲ್ಲಿ, ಬ್ಯಾಂಕಿಂಗ್‌ನಲ್ಲಿ. ವಿಮಾ ಕ್ಷೇತ್ರದಲ್ಲಿ ಇದು ಅಷ್ಟಾಗಿ ಬಳಕೆಗೆ ಬಂದಿಲ್ಲ. ಆದರೆ ಯಾವುದೇ ಉದ್ಯಮದಲ್ಲಾದರೂ ಹಣಕಾಸಿನ ವಿಶ್ಲೇಷಣೆ, ಮಾನವ ಸಂಪನ್ಮೂಲ, ಮಾಹಿತಿಯ ಆಧಾರದ ಮೇಲೆ ತೀರ್ಮಾನ ತೆಗೆದುಕೊಳ್ಳುವುದು ಸಮಾನವಾಗಿರುವುದರಿಂದ ಬ್ಯಾಂಕಿಂಗ್ ಕ್ಷೇತ್ರದಲ್ಲೂ ಈ ಯೋಜನೆಯನ್ನು ಇತ್ತೀಚಿಗೆ ಅಳವಡಿಸಿಕೊಳ್ಳಲಾಗುತ್ತಿದೆ. ಬಹು ಶಾಖಾ ವ್ಯವಸ್ಥೆಯಿರುವ ಬ್ಯಾಂಕಿಂಗ್ ಉದ್ಯಮದಲ್ಲಿ ಸಕಾಲಿಕ ಪರಿಪೂರ್ಣ ಮಾಹಿತಿ ಬಹಳ ಮುಖ್ಯ. ಈ ಯೋಜನೆಯ ವ್ಯವಸ್ಥೆಯನ್ನು ಅಳವಡಿಸಿಕೊಂಡಾಗ ಬ್ಯಾಂಕಿನಲ್ಲಿ ಆಸ್ತಿ-ಹೊಣೆ ವ್ಯವಸ್ಥಾಪನೆ ಹಾಗೂ ತೀರ್ಮಾನಗಳನ್ನು ಸರಿಯಾಗಿ ತೆಗೆದುಕೊಳ್ಳಲು ಸಾಧ್ಯವೆಂಬುದಕ್ಕೆ ಒಂದು ಉದಾಹರಣೆಯನ್ನು ಗಮನಿಸೋಣ.

ಬಹುಶಾಖಾ ವ್ಯವಸ್ಥೆಯಿರುವ ಬ್ಯಾಂಕೊಂದರ ಉನ್ನತ ವ್ಯವಸ್ಥಾಪನ ವರ್ಗದಲ್ಲಿ ನೀವಿದ್ದೀರಿ ಎಂದು ಊಹಿಸಿಕೊಳ್ಳೋಣ. ಬ್ಯಾಂಕಿನ ಕೇಂದ್ರ ಕಛೇರಿ ಹಾಗೂ ಶಾಖೆಗಳ ನಡುವೆ ನೇರ ಸಂಪರ್ಕವನ್ನು ಸಾಧಿಸುವುದರ ಜೊತೆಗೆ ಉದ್ಯಮ ಸಂಪನ್ಮೂಲ ಯೋಜನೆಯನ್ನು ಬ್ಯಾಂಕಿನಲ್ಲಿ ಅಳವಡಿಸಿಕೊಳ್ಳಲಾಗಿದೆ ಎಂದಿಟ್ಟುಕೊಳ್ಳೋಣ.

## ಆಸ್ತಿ–ಹೊಣೆ ವ್ಯವಸ್ಥಾಪನೆ

ಬ್ಯಾಂಕಿಂಗ್ ಉದ್ಯಮ ಸಮರ್ಪಕವಾಗಿ ಮುಂದುವರಿಯಲು ಆಸ್ತಿ-ಹೊಣೆಗಳ ನಿರ್ವಹಣೆ ಬಹಳ ಮುಖ್ಯ. ಆಸ್ತಿ-ಹೊಣೆ ವ್ಯವಸ್ಥಾಪನೆ ಎಂಬ ಒಂದು ಸಾಧನ ಉದ್ಯಮಸಂಪನ್ಮೂಲ ಯೋಜನೆಯಲ್ಲಿದೆ. ಈ ಸಾಧನ ಮಾರುಕಟ್ಟೆಯ ನಷ್ಟಸಂಭಾವ್ಯತೆ ಬಗ್ಗೆ ಮಾಹಿತಿ ನೀಡುವುದಲ್ಲದೆ ಬ್ಯಾಂಕು ಅನುಸರಿಸಬಹುದಾದ ಪರ್ಯಾಯ ಮಾರ್ಗಗಳ ಬಗ್ಗೆ ಹಾಗೂ ಅಲ್ಲಿರುವ ನಷ್ಟಸಂಭಾವ್ಯತೆ ಬಗ್ಗೆಯೂ ಮಾಹಿತಿ ನೀಡುತ್ತದೆ. ಬ್ಯಾಂಕಿನ ಎಲ್ಲ ಶಾಖೆಗಳ ವಹಿವಾಟುಗಳನ್ನು ಕೇಂದ್ರ ಕಛೇರಿಯಲ್ಲಿ ಆಯಾ ದಿನದಂದೇ ದಾಖಲಿಸಲು ಸಾಧ್ಯ. ಆದ್ದರಿಂದ ಬ್ಯಾಂಕಿನ ಆಡಳಿತ ಮಂಡಳಿಯಲ್ಲಿರುವ ನಿಮಗೆ ಬ್ಯಾಂಕಿನ ಆಸ್ತಿ-ಹೊಣೆಗಳ ಸ್ಥಿತಿ-ಗತಿಗಳು ಯಾವ ಕ್ಷಣದಲ್ಲಿ ಬೇಕಾದರೂ ಲಭ್ಯ. ವ್ಯಾಪಕವಾದ ಬದಲಾವಣೆಯನ್ನು ಕಾಣುತ್ತಿರುವ ಬ್ಯಾಂಕಿಂಗ್ ಉದ್ಯಮದಲ್ಲಿ ನಿಮ್ಮ ಬ್ಯಾಂಕಿನ ಶಾಖೆಗಳು ಯಾವ ರೀತಿಯ ಠೇವಣಿ ಯೋಜನೆಗಳನ್ನು ಪ್ರೋತ್ಸಾಹಿಸಬೇಕು ಮತ್ತು ಯಾವ ಬಡ್ಡಿ ದರವನ್ನು ಈ ಠೇವಣಿಗಳಿಗೆ ನೀಡಬೇಕೆಂಬುದರ ಬಗ್ಗೆ ನೀವು ತೀರ್ಮಾನ ತೆಗೆದುಕೊಳ್ಳಬೇಕಾಗಿದೆ ಎಂದುಕೊಳ್ಳೋಣ. ಈ ತೀರ್ಮಾನ ತೆಗೆದುಕೊಳ್ಳಲು ಅನೇಕ ಮಾಹಿತಿಗಳ ಜೊತೆಗೆ ಬಹಳ ಮುಖ್ಯವಾಗಿ ನಿಮ್ಮ ಬ್ಯಾಂಕಿನ ಇತ್ತೀಚಿನ ನಗದು ಹರಿವಿನ ಒಟ್ಟು ಸ್ವರೂಪ ನಿಮಗೆ ತಿಳಿದಿರಬೇಕಾಗುತ್ತದೆ. ಕೇಂದ್ರೀಕೃತವಾದ ಉದ್ಯಮ ಸಂಪನ್ಮೂಲ ಯೋಜನೆಯ ವ್ಯವಸ್ಥೆಯಲ್ಲಿನ ಮಾಹಿತಿ ವ್ಯವಸ್ಥಾಪನ ವ್ಯವಸ್ಥೆಯಿಂದಾಗಿ ನಿಮಗೆ ಈ ಮಾಹಿತಿ ತತ್‌ಕ್ಷಣದಲ್ಲಿ ಲಭ್ಯವಾಗುತ್ತದೆ. ಬ್ಯಾಂಕಿನ ಒಟ್ಟು ಆಸ್ತಿ-ಹೊಣೆಗಳನ್ನು ಗಮನಿಸಿದಾಗ ಬ್ಯಾಂಕಿನ ಆಸ್ತಿಗಳ ಪಕ್ವತೆ ಪರಿಪಕ್ವತೆ ಹೊಣೆಗಳ ಪಕ್ವತೆ ಪರಿಪಕ್ವತೆಗಳಿಗಿಂತ ದೀರ್ಘವಾಗಿರುವುದು ಕಂಡುಬರುತ್ತದೆ. ಈ ಪರಿಸ್ಥಿತಿಯಲ್ಲಿ

(19ನೇ ಪುಟ ನೋಡಿ)

# ಬಂಡವಾಳ ಖಾತೆ ಪರಿವರ್ತನೀಯತೆ


## ಶ್ರೀಮತಿ ಕುಮುದ ರಾಮಾನುಜಂ

ಪ್ರೊಫೆಸರ್ ಹಾಗೂ ಮುಖ್ಯಸ್ಥರು, ವಾಣಿಜ್ಯ ಮತ್ತು ನಿರ್ವಹಣೆ ವಿಭಾಗ, ಮಹಾರಾಣಿ ಕಲಾ ಕಾಲೇಜು, ಬೆಂಗಳೂರು 1



ಅಲ್ಪಕಾಲಿಕ ವಹಿವಾಟುಗಳ ಫಲವಾಗಿ ವಿದೇಶಿ ವಿನಿಮಯದ ಒಳಹೊರ ಹರಿವುಗಳಿಗೆ ಸಂಬಂಧಿಸಿದಂತೆ — ಎಂದರೆ ಚಾಲ್ತಿ ಖಾತೆಯಲ್ಲಿ — ರೂಪಾಯಿಯನ್ನು ಮುಕ್ತವಾಗಿ ಪರಿವರ್ತಿಸಬಹುದಾಗಿದೆ. ಆದರೆ ದೀರ್ಘಕಾಲಿಕವಾದ ಬಂಡವಾಳ ಸ್ವರೂಪದ ವಹಿವಾಟುಗಳಿಗೆ ಸಂಬಂಧಿಸಿದಂತೆ—ಬಂಡವಾಳ ಖಾತೆಯಡಿಯಲ್ಲಿ—ರೂಪಾಯಿಯು ಮುಕ್ತ ಪರಿವರ್ತನೀಯತೆಯ ಪ್ರಶ್ನೆ ಇನ್ನೂ ಹಲವಾರು ಅಡಚಣೆಗಳಿಗೆ ಒಳಗಾಗಿದೆ.


ಭಾರತೀಯ ರಿಸರ್ವ್ ಬ್ಯಾಂಕು 1997ರಲ್ಲಿ ಬಂಡವಾಳ ಖಾತೆಯಡಿ ಪರಿವರ್ತನೀಯತೆಯನ್ನು ದೇಶದಲ್ಲಿ ಪರಿಚಯಿಸಲು ನಿರ್ಧರಿಸಿತು. ಆ ನಿರ್ಧಾರಕ್ಕೆ ತಕ್ಕಂತೆ ಬೆಲೆಗಳನ್ನು ಹತೋಟಿಯಲ್ಲಿಡಲು ಬ್ಯಾಂಕಿನ ಬಡ್ಡಿ ದರಗಳನ್ನು ಕಡಿಮೆ ಮಾಡಿ, ಬ್ಯಾಂಕುಗಳ ನಗದು ಮೀಸಲಿನ ಅನುಪಾತವನ್ನು ಇಳಿಸಿದ್ದು ಎಲ್ಲ ಸಮೂಹ ಮಾಧ್ಯಮಗಳಲ್ಲೂ ವರದಿಯಾಗಿತ್ತು ಮತ್ತು ವರದಿಯಾಗುತ್ತಿದೆ. ಆದರೆ ಈಗ ಒಂದು ವರ್ಷದಿಂದ ಹಣದುಬ್ಬರದ ದರವನ್ನು ನಿತ್ಯವೂ ಘೋಷಿಸುವುದೇಕೆ ? ಹೆಚ್ಚಾಗಿದ್ದ ಬ್ಯಾಂಕ್ ಬಡ್ಡಿದರಗಳಲ್ಲಿ ಕಡಿತವೇಕೆ ? ಬ್ಯಾಂಕುಗಳ ನಗದು ಮೀಸಲಿನ ಅನುಪಾತವನ್ನು ಇಳಿಸಿದ್ದೇಕೆ ಎಂದು ಸಾಮಾನ್ಯರಿಗೆ ತತ್‌ಕ್ಷಣ ಅರ್ಥವಾಗುವುದಿಲ್ಲ. ಈ ಪ್ರಶ್ನೆಗಳಿಗೆಲ್ಲ ಉತ್ತರ ಪಡೆಯಲು ಬಂಡವಾಳ ಖಾತೆ ಪರಿವರ್ತನೀಯತೆಯ (ಬಂ.ಖಾ.ಪ.) ವಿಚಾರಗಳನ್ನು ತಿಳಿಯಬೇಕು. ಹಾಗಾದರೆ ಬಂ.ಕಾ.ಪ. ಎಂದರೇನು ? ಭಾರತೀಯ ರಿಸರ್ವ್ ಬ್ಯಾಂಕು (ಭಾ.ರಿ.ಬ್ಯಾಂ.) ಅದನ್ನೇಕೆ ಪರಿಚಯಿಸಿತು ? ಅದಕ್ಕಾಗಿ ಭಾರತದ ಆರ್ಥಿಕತೆ—ಹಣಕಾಸಿನ ಪರಿಸ್ಥಿತಿಯು ಹೇಗಿರಬೇಕು ಎಂಬುದನ್ನು ತಿಳಿಸಲು ಈ ಲೇಖನದಲ್ಲಿ ಪ್ರಯತ್ನ ಮಾಡಿದೆ.

"ಬಂಡವಾಳ ಖಾತೆ" ಎಂದರೆ ಒಂದು ದೇಶದ ವಿದೇಶಿ ವಿನಿಮಯ ವ್ಯವಹಾರಗಳ ಚಾಲ್ತಿ ಲೆಕ್ಕದಲ್ಲಿ ನಮೂದಾದ ವಹಿವಾಟುಗಳ ಫಲವಾಗಿ ವಿದೇಶಿ ಆಸ್ತಿ ಮತ್ತು ಹೊಣೆಗಳಲ್ಲಿ ಆದ ಬದಲಾವಣೆಗಳನ್ನು ಹಾಗೂ ಹಣದ ಮತ್ತಿತರ ಬಂಡವಾಳ ಬಾಬುಗಳ ವರ್ಗಾವಣೆಗಳನ್ನು ತೋರಿಸುವ ಖಾತೆ. "ಪರಿವರ್ತನೀಯತೆ" ಎಂದರೆ ಒಂದು ದೇಶದ ಚಲಾರ್ಥವನ್ನು ಇನ್ನೊಂದು ದೇಶದ ಅಥವ ದೇಶಗಳ ಚಲಾರ್ಥವನ್ನಾಗಿ ಪರಿವರ್ತಿಸುವುದು ಎಂದು ಅರ್ಥ. ಆದ್ದರಿಂದ ಭಾರತದ ರೂಪಾಯಿಯನ್ನು ಬಂಡವಾಳ ಖಾತೆಯ ವಹಿವಾಟುಗಳ ಮೂಲಕ ಇತರ ದೇಶಗಳ ಚಲಾರ್ಥವನ್ನಾಗಿ ಪರಿವರ್ತಿಸುವುದು ಎಂದು ತಿಳಿದುಬರುತ್ತದೆ.

ಭಾರತೀಯ ರಿಸರ್ವ್ ಬ್ಯಾಂಕು 1997ರ ಫೆಬ್ರುವರಿ 28ರಂದು ಅದೇ ಬ್ಯಾಂಕಿನ ಡೆಪ್ಯುಟಿಗವರ್ನರ್ ಎಸ್. ಎಸ್. ತಾರಾಪುರ್ ಅವರ ಅಧ್ಯಕ್ಷತೆಯಲ್ಲಿ ಬಂಡವಾಳ ಖಾತೆ ಪರಿವರ್ತನೀಯತೆಯ ಸಮಿತಿಯನ್ನು ರಚಿಸಿ, ಮೂರು ತಿಂಗಳು ಅಧ್ಯಯನ ನಡೆಸಿದ ನಂತರ ವರದಿಯನ್ನು ಸಲ್ಲಿಸಲು ಆದೇಶ ನೀಡಿತು. ಮತ್ತು ಈ ಕೆಳಗಿನ ಅಂಶಗಳನ್ನು ಅಧ್ಯಯನಕ್ಕಾಗಿ ಪರಿಗಣಿಸಬೇಕೆಂದು ತಿಳಿಸಿತು :

1 ಬಂ.ಖಾ.ಪ.ಯನ್ನು ಕುರಿತು ಅಂತರರಾಷ್ಟ್ರೀಯ ಅನುಭವಗಳನ್ನು ವಿಮರ್ಶಿಸಿ, ಪರಿವರ್ತತೀಯತೆಗೆ ಅಗತ್ಯವಾಗಿರುವ ಮುಂಪರತ್ತುಗಳನ್ನು ಸೂಚಿಸುವುದು.

2 ಬಂ.ಖಾ.ಪ.ಯನ್ನು ಸಾಧಿಸಲು ಕ್ರಮಗಳನ್ನು ಶಿಫಾರ್ಸು ಮಾಡುವುದು.

3 ಈ ಕ್ರಮಗಳನ್ನು ಜಾರಿಗೆ ತರುವ ರೀತಿ ಹಾಗೂ ಕಾಲಮಿತಿಯನ್ನು ನಿರ್ದಿಷ್ಟವಾಗಿ ತಿಳಿಸುವುದು.

4 ಸ್ವದೇಶದ ನೀತಿ ಕ್ರಮಗಳಲ್ಲಿ ಹಾಗೂ ಸಾಂಸ್ಥಿಕ ಚೌಕಟ್ಟಿನಲ್ಲಿ ಮಾಡಬೇಕಾಗಿರುವ ಬದಲಾವಣೆಗಳನ್ನು ಕುರಿತು ಸಲಹೆಗಳನ್ನು ನೀಡುವುದು.

ಆದೇಶದಂತೆ ತಾರಾಪುರ್ ಸಮಿತಿಯು ಅಧ್ಯಯನವನ್ನು ಪೂರೈಸಿ 1977ರ ಜೂನ್ 3ರಂದು ಭಾ.ರಿ. ಬ್ಯಾಂಕಿನ ಗವರ್ನರ್ ಅವರಿಗೆ ತನ್ನ ವರದಿಯನ್ನು ಸಲ್ಲಿಸಿತು. ಆ ವರದಿಯ ಕೆಲವು ಮುಖ್ಯಾಂಶಗಳನ್ನು ಇಲ್ಲಿ ವಿವರಿಸಿದೆ :

**(1) ಬಂ.ಖಾ.ಪ.ಯ ವಿಚಾರದಲ್ಲಿ ಅಂತರರಾಷ್ಟ್ರೀಯ ಅನುಭವಗಳನ್ನು ವಿಮರ್ಶಿಸಿದಾಗ ತಿಳಿದುಬಂದ ಅಂಶಗಳು ಹೀಗಿವೆ:**

ಬಂಡವಾಳ ಖಾತೆಯ ಉದಾರೀಕರಣವು ಬಂಡವಾಳದ

ಒಳಹರಿವನ್ನು ಅಧಿಕವಾಗಲು ಪ್ರಚೋದಿಸುವುದರಿಂದ ವಿನಿಮಯ ದರದಲ್ಲಿ ವಾಸ್ತವವಾಗಿ ಏರಿಕೆಯುಂಟಾಗಬಹುದು ಮತ್ತು ದೇಶದ ಹಣಕಾಸಿನ ನೀತಿಯ ಪರಿಣಾಮಕತೆಯನ್ನು ಕುಂದಿಸಬಹುದು.

ಮುಕ್ತಬಂಡವಾಳ ಖಾತೆಯು ಹಣಕಾಸಿನ ವ್ಯವಸ್ಥೆಯ ಮೇಲೆ ಅತಿಯಾಗಿ ಒತ್ತಡಗಳನ್ನು ತರುವುದರಿಂದ ಆ ವ್ಯವಸ್ಥೆಯ ದುರ್ಬಲತೆಗಳನ್ನು ತೀಕ್ಷ್ಣವಾಗಿ ಬೆಳಕಿಗೆ ತರುತ್ತದೆ.

ಬಂ. ಖಾ. ಪ.ಯನ್ನು ಪರಿಚಯಿಸದಿದ್ದರೂ ಸಹ ವ್ಯವಸ್ಥೆಯಲ್ಲಿ ಅಡಚಣೆಗಳನ್ನು ಹೇರುವಂಥ ದುರ್ಬಲತೆಗಳನ್ನು ತಿಳಿಯುವ ಅಗತ್ಯವಿರುತ್ತದೆ. ಆದರೆ ಬಂ.ಖಾ.ಪ.ಯನ್ನು ಜಾರಿಗೊಳಿಸಲು ಹಣಕಾಸಿನ ವ್ಯವಸ್ಥೆಯಲ್ಲಿ ಒಳ್ಳೆಯ ಶಿಸ್ತಿನ ಅಗತ್ಯವಿರುವುದರಿಂದ, ಆ ವ್ಯವಸ್ಥೆಯಲ್ಲಿರುವ ದುರ್ಬಲತೆಗಳನ್ನು (ಚಂಚಲತೆಗಳನ್ನು) ತ್ವರಿತವಾಗಿ ನೀಗಬೇಕಾಗುತ್ತದೆ.

### (2) ಭಾರತದಲ್ಲಿ ಪರಿವರ್ತನೀಯತೆ

ಅಂತರಾಷ್ಟ್ರೀಯ ಹಣ ನಿಧಿ ಸಂಸ್ಥೆಯ ಆದೇಶದಂತೆ ವಿದ್ಯುಕ್ತವಾಗಿ ಚಾಲ್ತಿಖಾತೆ ಪರಿವರ್ತನೀಯತೆಯನ್ನು ಭಾರತದಲ್ಲಿ 1994ರ ಆಗಸ್ಟ್ ತಿಂಗಳಿಂದ ಜಾರಿಗೆ ತಂದು, ವಿದೇಶಿ ಹೂಡಿಕೆದಾರರಿಗೆ, ಅನಿವಾಸಿ ಠೇವಣಿದಾರರಿಗೆ ಮತ್ತು ಬಾಹ್ಯವಾಣಿಜ್ಯ ಋಣ ವ್ಯವಹಾರಗಳಲ್ಲಿ ತೊಡಗಿರುವ ದೇಶಿ ನಿಗಮಗಳಿಗೆ ಈ ಸೌಲಭ್ಯವನ್ನು ಒದಗಿಸಲಾಗಿದೆ. ಆದರೆ ಬ್ಯಾಂಕುಗಳ ಮತ್ತು ಬ್ಯಾಂಕೇತರ ಹಣಕಾಸಿನ ಘಟಕಗಳ ಬಂಡವಾಳದ ಒಳ ಮತ್ತು ಹೊರ ಹರಿವುಗಳು ಹಾಗೂ ನಿವಾಸಿ ವ್ಯಕ್ತಿಗಳು ಮತ್ತು ನಿಗಮಗಳು ಬಂಡವಾಳವನ್ನು ವಿದೇಶಗಳಿಗೆ ಕಳುಹಿಸುವ ವಹಿವಾಟುಗಳು ನಿಯಂತ್ರಣಕ್ಕೆ ಒಳಪಟ್ಟಿವೆ. ಈ ನಿಯಂತ್ರಣಗಳನ್ನು ಇನ್ನು ಮುಂದೆ ಸಡಿಲಿಸಬೇಕೆಂದು ಸಮಿತಿಯು ತಿಳಿಸಿದೆ.

ಭಾರತವು ಬೆಳವಣಿಗೆಯ ಸಾಮರ್ಥ್ಯದಲ್ಲಿ ಸ್ಥಿರತೆಯನ್ನು ಮತ್ತು ಆರ್ಥಿಕ ಸ್ವರೂಪ ಸುಧಾರಣೆಗಳಲ್ಲಿ ದೃಢವಾಗಿ ಮುನ್ನಡೆಯನ್ನು ಸಾಧಿಸಿರುವುದರಿಂದ, ಬಂ.ಖಾ.ಪ.ಯನ್ನು ಪರಿಚಯಿಸಲು ಈಗ ಸಕಾಲವೆಂದು ಸಮಿತಿಯು ಶಿಫಾರ್ಸು ಮಾಡಿದೆ. ಬಂಡವಾಳದ ನಿಯಂತ್ರಣಗಳನ್ನು ಮುಂದುವರಿಸುವುದರಿಂದ ಪರಿಣಾಮಹೀನವಾಗಿ, ವೆಚ್ಚಗಳನ್ನು ಹೆಚ್ಚಿಸಿ, ಏರುಪೇರುಗಳಿಗೆ ಕಾರಣವಾಗಬಹುದೆಂದು ತಿಳಿಸಿದೆ. ಅಷ್ಟೇ ಅಲ್ಲ, ಬಂ.ಖಾ.ಪ. ಯಿಂದಾಗುವ ಕೆಲವು ಅನುಕೂಲಗಳನ್ನು ಪಟ್ಟಿ ಮಾಡಿದೆ:

1 ಅಂತರರಾಷ್ಟ್ರೀಯ ದರದಲ್ಲಿ ಬಂಡವಾಳದ ಲಭ್ಯತೆಯು ಅಧಿಕವಾಗಿರುವುದರಿಂದ ಸ್ವದೇಶದ ಸಂಪನ್ಮೂಲಗಳ ಕೊರತೆಯನ್ನು ತುಂಬಿಕೊಳ್ಳಲು ಬರುತ್ತದೆ.

2 ಈ ಮೂಲಕ ಗಂಡಾಂತರಗಳನ್ನು ತೊಲಗಿಸುವ ಸಾಮರ್ಥ್ಯವನ್ನು, ಹಂಚಿಕೆಯಲ್ಲಿ ದಕ್ಷತೆಯನ್ನು ಮತ್ತು ಹಣಕಾಸಿನ ಸಂಪನ್ಮೂಲಗಳ ಮಧ್ಯಸ್ಥಿಕೆಯ ವಹಿವಾಟುಗಳಿಗೆ ಹೆಚ್ಚು ಅವಕಾಶಗಳನ್ನು ಸಾಧಿಸಬಹುದು.

3 ಹೀಗೆ ಹಣಕಾಸಿನ ಮಾರುಕಟ್ಟೆಗಳ ಅಭಿವೃದ್ಧಿಗೆ ಅವಕಾಶವಿರುವುದರಿಂದ ವಿಶಾಲಾತ್ಮಕ ಆರ್ಥಿಕ ನೀತಿಗಳಲ್ಲಿ ಶಿಸ್ತನ್ನು ಸಾಧಿಸಬಹುದು.

4 ಬಂಡವಾಳದ ಒಳ ಹರಿವಿನ ಉದಾರೀಕರಣದ ಜತೆ ಜತೆಗೆ ಜಾಗ್ರತೆಯಾಗಿ ಹೊರ ಹರಿವಿನ ನಿಯಂತ್ರಣಗಳನ್ನು ಸಡಿಲಿಸಿ ಮುಕ್ತಗೊಳಿಸುವುದರಿಂದ, ಇಬ್ಬಗೆಯ ಹರಿವಿನ ನಡುವೆ ಪೈಪೋಟಿಯನ್ನು ಬೆಳೆಸುವುದು ಸೂಕ್ತವೆಂದು ಸಮಿತಿಯು ಶಿಫಾರ್ಸು ಮಾಡಿದೆ.

5 ಸ್ವಲ್ಪ ಬಂಡವಾಳದ ಹೊರ ಹರಿವಿನ ಮೂಲಕ ಸಂಪನ್ಮೂಲದ ಸಮರ್ಥ ಬಳಕೆಯ ಸಾಧ್ಯತೆಯಲ್ಲಿ ವಿಶ್ವಾಸ ಬೆಳೆಸಿಕೊಳ್ಳಬೇಕು.

6 ಅಷ್ಟೇ ಅಲ್ಲ, ಬಂಡವಾಳದ ಒಳ ಹರಿವಿನ ಏರಿಕೆಯಿಂದ ವಿನಿಮಯ ದರದ ಮೇಲೆ ಹಾಗೂ ಹಣಕಾಸಿನ ಒಟ್ಟು ಸ್ಥಿತಿಯ ಮೇಲೆ ಉಂಟಾಗುವ ಒತ್ತಡಗಳನ್ನು ಬಂ. ಖಾ. ಪ.ಯು ತಾಳಿಕೊಂಡು, ದೇಶಿ ನೀತಿಗಳ ಪರಿಣಾಮಾತ್ಮಕತೆಯನ್ನು ಹೆಚ್ಚಿಸುತ್ತದೆ.

### (3) ಬಂ.ಖಾ.ಪ.ಗೆ ವೇಳಾಪಟ್ಟಿ

ಭಾರತದ ಆರ್ಥಿಕ ಸ್ಥಿತಿಗತಿಗಳನ್ನು ಹಾಗೂ ಪರಿವರ್ತನೀಯತೆಯ ಮುಂಷರತ್ತುಗಳನ್ನು ಪರಿಗಣಿಸಿ 1997ರಿಂದ 2000ದ ವರೆಗೆ ಮೂರು ವಾರ್ಷಿಕ ಹಂತಗಳಲ್ಲಿ ಬಂ.ಖಾ.ಪ.ಯನ್ನು ಜಾರಿಗೆ ತರಬೇಕೆಂದು ಶಿಫಾರ್ಸು ಮಾಡಿದೆ. ಪ್ರತಿ ಹಂತದ ಕ್ರಮಗಳನ್ನು ಜಾಗರೂಕತೆಯಿಂದ ಜಾರಿಗೊಳಿಸಬೇಕು. ಪ್ರತಿ ಹಂತದಲ್ಲೂ ಮುಂಷರತ್ತುಗಳ ಪೂರೈಕೆಯನ್ನು ತಿಳಿದು ಮುನ್ನಡೆಯಬೇಕು. ಅಂತರರಾಷ್ಟ್ರೀಯ ಅನುಭವ ಹಾಗೂ ಭಾರತದ ಸ್ಥಿತಿಗತಿಗಳನ್ನು ಪರಿಗಣಿಸಿ ಹಲವು ಮುಖ್ಯವಾದ ಅಸ್ಥಿರತೆಗಳನ್ನು ಗುರುತಿಸಬೇಕು, ಇವುಗಳನ್ನು ಸೂಚಕಗಳಿಗಿಂತ ಪ್ರಕ್ರಿಯೆಯ ಅಂಶಗಳೆಂದು ಅರಿಯಬೇಕು. ಸಾಧನೆಗಳ ಸಮರ್ಪಕವಾದ ಮೌಲ್ಯಾಂಕನದ ನಂತರ ಬಂ. ಖಾ. ಪ. ಯ ಕಾಲ ಮತ್ತು ಕ್ರಮಗಳ ವೇಗವನ್ನು ಹೆಚ್ಚು ಕಡಿಮೆ ಮಾಡಬಹುದು. ಮೂರು ವರ್ಷಗಳ ನಂತರ ಪೂರ್ಣ ಸ್ಥಿತಿಯ ಮುನ್ನಡೆಯನ್ನು, ಮುಂಷರತ್ತುಗಳ ಸಾಧನೆಯನ್ನು ಪರಿಶೀಲಿಸಿ, ಜಾರಿಗೊಳಿಸಿದ ಕ್ರಮಗಳ ಹೊಡೆತ ಹೇಗೆ ಮತ್ತು ಎಲ್ಲಿ ಆಗಿದೆ ಎಂಬುದನ್ನು ಅರಿಯಬೇಕು. ಬಂ.ಖಾ.ಪ.ಯ ಒಂದು ನಿರಂತರ ಪ್ರಕ್ರಿಯೆಯಾಗಿರುವುದರಿಂದ ಆಯಾ ಕಾಲ, ಸ್ಥಿತಿಗಳ ಮತ್ತು ಅನುಭವಗಳ ಹಿನ್ನೆಲೆಯಲ್ಲಿ ಮುಂದಿನ ಕ್ರಮಗಳನ್ನು ಕೈಗೊಳ್ಳಬೇಕು.

### (4) ಬಂ.ಖಾ.ಪ.ಯ ಮುಂಷರತ್ತುಗಳು

ಸಮಿತಿಯು ಭಾರತದ ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಿ ಅಗತ್ಯವಾಗಿರುವ ಮೂರು ಮುಂಷರತ್ತುಗಳನ್ನು ಶಿಫಾರ್ಸು ಮಾಡಿದೆ. (ಅ) ವಿತ್ತೀಯ ಕ್ರೋಡೀಕರಣ (ಆ) ಹಣದುಬ್ಬರದ

ಗುರಿಯನ್ನು ಆಜ್ಞೆಯ ಮೂಲಕ ವಿಧಿಸುವುದು ಮತ್ತು (ಇ) ಹಣಕಾಸಿನ ವ್ಯವಸ್ಥೆಯನ್ನು ಸುದೃಢಗೊಳಿಸುವುದು.

### (ಅ) ವಿತ್ತೀಯ ಕ್ರೋಢೀಕರಣ

ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಕೇಂದ್ರದ ಒಟ್ಟು ವಿತ್ತೀಯ ಕೊರತೆಯ ಅನುಪಾತವನ್ನು ಕ್ರಮವಾಗಿ ಮೂರು ವರ್ಷಗಳ ಅವಧಿಯಲ್ಲಿ ಇಳಿಸಬೇಕು. ಅಂದರೆ 1997–1998ರ ಮುಂಗಡ ಪತ್ರದಲ್ಲಿ ಸೂಚಿಸಿರುವ ಅನುಪಾತ ಶೇ 4.5ರಿಂದ 98–99ರಲ್ಲಿ ಶೇ 4ಕ್ಕೆ ಹಾಗೂ 99–2000ದಲ್ಲಿ ಶೇ. 3.5ಕ್ಕೆ ಇಳಿಸಬೇಕು. ಇದಕ್ಕೆ ತಕ್ಕಂತೆ ರಾಜ್ಯದ ಹಾಗೂ ಅರೆವಿತ್ತೀಯ ಕೊರತೆಗಳನ್ನು ಕಡಿಮೆಮಾಡಬೇಕು.

ಸರ್ಕಾರ ತನ್ನ ಸಾಲಗಳನ್ನು ತೀರಿಸಲು ಹೊಸ ಸಾಲಗಳನ್ನೆತ್ತುವುದು ಆರ್ಥಿಕ ಬೆಳವಣಿಗೆಗೆಆತಂಕಕಾರಿಯಾಗಿದ್ದು ಬಿಕ್ಕಟ್ಟಿಗೆ ಎಡೆ ಕೊಡುವುದನ್ನು ಗುರುತಿಸಿ, ವಿತ್ತೀಯ ವ್ಯವಸ್ಥೆಯಲ್ಲಿ ಭಾಗಶಃ ಪಾರದರ್ಶಿಕತೆಗಾಗಿ ಕ್ರೋಢೀಕರಿಸಿದ ತೀರುವಳಿ ನಿಧಿಯನ್ನು ಪರಿಚಯಿಸಬೇಕು ಮತ್ತು ಈ ನಿಧಿಯನ್ನು ಬೆಳೆಸಲು ಭಾ.ರಿ. ಬ್ಯಾಂಕು ಸರ್ಕಾರಕ್ಕೆ ವರ್ಗಾಯಿಸುವ ಹೆಚ್ಚುವರಿ ಲಾಭಗಳನ್ನು ಹಾಗೂ ಸರ್ಕಾರಿ ಹೂಡಿಕೆಯ ಮಾರಾಟ ಗಳಿಕೆಗಳನ್ನು ಪೂರ್ಣವಾಗಿ ಬಳಸಬೇಕು ಎಂದು ಸಮಿತಿಯು ಶಿಫಾರ್ಸು ಮಾಡಿದೆ.

ನ್ಯೂಜಿಲೆಂಡಿನ ದತ್ತೀಯ ಹೊಣೆಗಾರಿಕೆ ಕಾಯ್ದೆಯನ್ನು ಮಾರ್ಗದರ್ಶಕವಾಗಿಟ್ಟುಕೊಂಡು ಆದಷ್ಟು ಬೇಗ ವಿತ್ತೀಯ ಪಾರದರ್ಶಿಕತೆ ಮತ್ತು ಲೆಕ್ಕದಾಯಿತ್ವದ ವ್ಯವಸ್ಥೆಯನ್ನು ಪರಿಚಯಿಸಬೇಕು.

ಸರ್ಕಾರವು ಸಾರ್ವಜನಿಕ ಋಣಗಳ ವಹಿವಾಟುಗಳಿಗೆ ತನ್ನ ಮಾಲೀಕತ್ವದಲ್ಲಿ ಕಛೇರಿಯನ್ನು ತೆರೆಯಬೇಕು, ಹಾಗೂ ಸರ್ಕಾರಿ ಪ್ರಾಥಮಿಕ ಋಣಗಳ ವಹಿವಾಟುಗಳಲ್ಲಿ ಬಾ.ರಿ. ಬ್ಯಾಂಕು ಪಾಲ್ಗೊಳ್ಳದೆ ಒಟ್ಟಾರೆ ದೂರ ಸರಿಯಬೇಕು.

### (ಆ) ಹಣದುಬ್ಬರದ ದರವನ್ನು ನಿಗದಿಸುವ ಆಜ್ಞೆ

ಈ ಮೂರು ವರ್ಷಗಳು ಹಣದುಬ್ಬರದ ದರವನ್ನು ಸರಾಸರಿ ಶೇ. 3.5ರಲ್ಲೇ ಇರಿಸಬೇಕೆಂದು ಆಜ್ಞೆಯ ಮೂಲಕ ವಿಧಿಸಬೇಕು. ಸಂಸತ್ತಿನ ಅನುಮೋದನೆಯ ಮೂಲಕ ಭಾ.ರಿ. ಬ್ಯಾಂಕಿಗೆ ಆಜ್ಞೆಯ ವಿಚಾರದಲ್ಲಿ ಅಧಿಕಾರವನ್ನು ನೀಡಬೇಕು. ಈ ಆಜ್ಞೆಯನ್ನು ಬದಲಾಯಿಸುವ ಹಕ್ಕು ಸಂಸತ್ತಿಗೆ ಮಾತ್ರ ಇರಬೇಕು. ಆಜ್ಞೆಯಂತೆ ಭಾ.ರಿ. ಬ್ಯಾಂಕಿಗೆ ಗುರಿಯನ್ನು ಸಾಧಿಸುವ ಸ್ವಾತಂತ್ರ್ಯ ಇರಬೇಕು. ಈ ಆಜ್ಞೆಯನ್ನು ಬದಲಾಯಿಸುವ ಸಾಧ್ಯತೆ ಮತ್ತು ಸಂದರ್ಭಗಳನ್ನು ಕುರಿತ ಮಾರ್ಗದರ್ಶನವು ತಿಳಿಯಾಗಿ, ಪಾರದರ್ಶಕವಾಗಿರಬೇಕು ಮತ್ತು ಅದರಲ್ಲಿ ಭಾ.ರಿ. ಬ್ಯಾಂಕಿಗೆ ಅಧಿಕವಾದ ಸ್ವಾತಂತ್ರ್ಯವನ್ನು ಒದಗಿಸಬೇಕು.

### (ಇ) ಹಣಕಾಸಿನ ವ್ಯವಸ್ಥೆಯನ್ನು ಸುದೃಢಗೊಳಿಸುವುದು

ಸುದೃಢವಾದ ಹಣಕಾಸಿನ ವ್ಯವಸ್ಥೆಯು ಬಂ.ಖಾ.ಪ.ತೆಗೆ ಅತಿ ಮುಖ್ಯವಾದ ಒಂದು ಮುಂಷರತ್ತಾಗಿರುವುದರಿಂದ ಈ ಕ್ಷೇತ್ರದಲ್ಲಿರುವ ದುರ್ಬಲತೆಗಳನ್ನು ತ್ವರಿತವಾಗಿ ನಿವಾರಿಸುವ ಕ್ರಮಗಳನ್ನು ಕೈಗೊಳ್ಳಬೇಕು ಎಂದು ಸಮಿತಿಯು ಸೂಚಿಸಿದೆ. ಇದಕ್ಕಾಗಿ ಜಾರಿಗೊಳಿಸಬೇಕಾದ ಕ್ರಮಗಳು ಹೀಗಿವೆ:

ಅ ಬಡ್ಡಿದರದ ಮೇಲಿನ ನಿರ್ಬಂಧಗಳನ್ನು 1997-98ರಲ್ಲಿ ಪೂರ್ಣವಾಗಿ ತೆಗೆದು ಹಾಕಬೇಕು ಮತ್ತು ಸಾಂಪ್ರದಾಯಿಕ ಹಾಗೂ ಅಸಾಂಪ್ರದಾಯಿಕ ನಿರ್ಬಂಧಗಳಾವುದೂ ಇರಬಾರದು.

ಆ ಸರಾಸರಿ ಪರಿಣಾಮಕಾರಿ ನಗದು ಮೀಸಲಿನ ಅನುಪಾತವನ್ನು ಏಪ್ರಿಲ್ 97ರ ಅಂಕಿ ಶೇ. 9.3ರಿಂದ, 1997-98ರಲ್ಲಿ ಶೇ. 8ಕ್ಕೆ 1998-99ರಲ್ಲಿ ಶೇ. 6ಕ್ಕೆ ಮತ್ತು 99-2000ರಲ್ಲಿ ಶೇ. 3ಕ್ಕೆ ಇಳಿಸಬೇಕು.

ಇ ಬ್ಯಾಂಕುಗಳ ನಿಷ್ಕ್ರಿಯ ಆಸ್ತಿಗಳ ಪಾಲನ್ನು ಕ್ರಮವಾಗಿ ಇಳಿಸಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಬೇಕು. ಮಾರ್ಚಿ 1997ರಲ್ಲಿ ಒಟ್ಟು ಸಾಲ ನೀಡಿಕೆಗಳ ಶೇ. 13.7ರಷ್ಟಿದ್ದ ನಿಷ್ಕ್ರಿಯ ಆಸ್ತಿಗಳನ್ನು 1997-98ರಲ್ಲಿ ಶೇ. 12ಕ್ಕೆ 1998-99ರಲ್ಲಿ ಶೇ. 9ಕ್ಕೆ ಮತ್ತು 1999-2000ದಲ್ಲಿ ಶೇ. 5ಕ್ಕೆ ಇಳಿಸಬೇಕು.

ಈ ಬ್ಯಾಂಕಿಂಗ್ ವ್ಯವಸ್ಥೆಯ ಬೆಳವಣಿಗೆಯ ದರವನ್ನು ಮೀರಿ ಬೆಳೆಯುತ್ತಿರುವ ಕೆಲವು ದುರ್ಬಲ ಬ್ಯಾಂಕುಗಳನ್ನು ಕಿರಿದಾದ ಬ್ಯಾಂಕುಗಳಾಗಿ ಪರಿವರ್ತಿಸಲು ಸಮಿತಿಯು ಶಿಫಾರಸ್ಸು ಮಾಡಿದೆ. ದುರ್ಬಲ ಬ್ಯಾಂಕುಗಳಲ್ಲಿ ಅಧಿಕರಿಸಿದ ಸಂಪನ್ಮೂಲಗಳನ್ನು ಸರ್ಕಾರಿ ಪ್ರತಿಭೂತಿಗಳಲ್ಲಿ ಮಾತ್ರ ಹೂಡಬೇಕು ಮತ್ತು ದುರ್ಬಲತೆಯು ಅತಿಯಾಗಿರುವ ಬ್ಯಾಂಕುಗಳ ಹೊಣೆಗಳ ಬೆಳವಣಿಗೆಯ ಮೇಲೆ ನಿರ್ಬಂಧಗಳನ್ನು ಹೇರಿ ಅವುಗಳನ್ನು ಕಿರಿದಾದ ಬ್ಯಾಂಕುಗಳಾಗಿ ಪರಿವರ್ತಿಸಬೇಕು.

### (5) ಪರಿವರ್ತನೀಯತೆಯ ಒಡನಾಡಿ, ಬದಲಾವಣೆಗಳ ಸೂಚಕಗಳನ್ನು ಕುರಿತು ಎಚ್ಚರಿಕೆ

ಬಂ.ಖಾ.ಪ.ಯ ವೇಳಾ ಪಟ್ಟಿ ಮತ್ತು ಕ್ರಮಗಳ ಸರಣಿಯನ್ನು ನಿರ್ಧರಿಸುವಾಗ ಕೆಲವು ಪ್ರಮುಖವಾದ ವಿಶಾಲಾತ್ಮಕ ಆರ್ಥಿಕತೆಯ ಸೂಚಕಗಳ ಬಗ್ಗೆ ಎಚ್ಚರಿಕೆ ವಹಿಸಬೇಕೆಂದು ಸಮಿತಿಯು ತಿಳಿಸಿದೆ. ಆ ಆರ್ಥಿಕ ಸೂಚಕಗಳು ಇವು—ವಿನಿಮಯ ದರ, ಪಾವತಿ ಶಿಲ್ಕು ಮತ್ತು ಮೀಸಲುಗಳ ಪರ್ಯಾಪ್ತತೆ.

ವಿನಿಮಯ ದರದ ನೀತಿಯನ್ನು ಪಾಲಿಸಲು ಭಾ.ರಿ. ಬ್ಯಾಂಕು ತಟಸ್ಥ ನೈಜ ಪರಿಣಾಮಕಾರಿ ವಿನಿಮಯ ದರದ ಸೂತ್ರ

ಶೇ. + ,-5 ಕಣ್ಣಾಗವಲು ವಲಯವನ್ನು ಹೊಂದಿರಬೇಕು ಮತ್ತು ನೈಜ ಪರಿಣಾಮಕಾರಿ ವಿನಿಮಯ ದರವು (ನೈ.ಪ.ವಿ.ದ) ಈ ವಲಯದ ಹೊರಗಿದ್ದರೆ ತಾನು ಕ್ರಮ ಕೈಗೊಳ್ಳಬೇಕು. ಈ ನಿರ್ಲಿಪ್ತ ನೈ.ಪ.ವಿ.ದ.ವನ್ನು ತಾತ್ವಿಕವಾಗಿ ಅಗತ್ಯಕ್ಕೆ ತಕ್ಕಂತೆ ಬದಲಾಯಿಸಬಹುದು. ವಿನಿಮಯ ದರದ ನೀತಿಯಲ್ಲಿ ಪಾರ ದರ್ಶಕತೆ ಇರಬೇಕು. ನಿ.ಪ.ವಿ.ದ.ವನ್ನು ಘೋಷಿಸಿ ಪತ್ರಿಕೆಗಳಲ್ಲಿ ವರದಿ ಮಾಡಬೇಕು ಮತ್ತು ನಿರ್ಲಿಪ್ತ ನಿ.ಪ.ವಿ.ದರದ ಬದಲಾ ವಣೆಗಳನ್ನು ಜನತೆಗೆ ತಿಳಿಸಬೇಕು.

ಈ ಮೂರು ವರ್ಷಗಳು ನಿಯಂತ್ರಣಾಧಿಕಾರವನ್ನು ಬಳಸಿ ಬಾಹ್ಯ ಕ್ಷೇತ್ರದ ನೀತಿಗಳನ್ನು ಹೀಗೆ ರೂಪಿಸಬೇಕು—ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಚಾಲ್ತಿ ವರಮಾನಗಳ ಅನುಪಾತವನ್ನು ಈಗಿರುವ ಶೇ. 15ರಿಂದ ಮೇಲೇರಿಸಬೇಕು ಮತ್ತು ಋಣ ಗಳ ಋಣಗಳ ಸೇವೆಯ ಅನುಪಾತವನ್ನು ಈಗಿನ ಶೇಕಡ 25ರಿಂದ ಶೇ. 20ಕ್ಕೆ ಇಳಿಸಲು ಶ್ರಮಿಸಬೇಕು. ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಚಾಲ್ತಿ ಖಾತೆ ಕೊರತೆಯ ಅನುಪಾತವು ಈ ಮೇಲಿನ ಅಂಶಗಳಿಗೆ ಹೊಂದುವಂತಿರಬೇಕು.

ಬಂಡವಾಳದ ಹರಿವು ಪಾವತಿ ಶಿಲ್ಕಿನ ಮೇಲೆ ಪ್ರಮುಖವಾದ ಪರಿಣಾಮವನ್ನು ಬೀರುವುದರಿಂದ ಆಮದನ್ನಾಧರಿಸಿದ ಮೀಸಲಿನ ಸಾಂಪ್ರದಾಯಿಕ ಸೂಚಕವು, ಬಂ.ಖಾ.ಪ.ಯನ್ನು ಪರಿಚಯಿಸಿದ ನಂತರ ಮೀಸಲಿನ ಪರ್ಯಾಪ್ತತೆಯನ್ನು ಅಳೆಯಲು ಸೂಕ್ತವೆನಿ ಸುವುದಿಲ್ಲ. ಭಾರತದ ಪರಿಸ್ಥಿತಿಗೆ ಅನ್ವಯಿಸುವಂತೆ ಮೀಸಲುಗಳ ಪರ್ಯಾಪ್ತತೆಯ ಮೌಲ್ಯಾಂಕನಕ್ಕಾಗಿ ಸಮಿತಿಯು ನಾಲ್ಕು ಬದಲಿ ಸೂಚಕಗಳನ್ನು ತಿಳಿಸಿದೆ. ಅವುಗಳಲ್ಲಿ ಮೂರು ಕ್ರಮಗಳಲ್ಲಿ ಪರಿಗಣಿಸಬೇಕಾದ ಅಂಶಗಳನ್ನು ಸಮಿತಿಯು ಹೀಗೆ ನಿರೂಪಿಸಿದೆ : (1) ಒಟ್ಟು ಆಮದುಗಳು (2) ಋಣಗಳ ಸೇವಾ ಪಾವತಿಗಳು (3) ಚಂಚಲ ಬಂಡವಾಳದ ಹರಿವುಗಳನ್ನು ಭರಿಸುವ ಮೊತ್ತ—ಅಂದರೆ ಹರಿವಿನ ಅಧಿಕತೆ ಮತ್ತು ಕೊರತೆಗಳನ್ನು ಸರಿದೂಗಿಸಲು ಬದಲಾಗುವಂಥ ಮತ್ತು ಸಾಕಷ್ಟು ವಿದೇಶಿ ವಿನಿಮಯದ ಮೀಸಲು ನಿಧಿ ಇಲ್ಲದೆ ಚಲಾರ್ಥದಲ್ಲಿ ಅಂಕೆ ಇಲ್ಲದ ಏರಿಕೆಯನ್ನು ತಡೆಯಲು ಭಾರತೀಯ ರಿಸರ್ವ್ ಬ್ಯಾಂಕಿನ ಕಾಯ್ದೆಯಲ್ಲಿ ಕಾನೂನಿನ ಪ್ರಕಾರ ಚಲಾರ್ಥದ ಶೇ. 40ರಷ್ಟು ಅನುಪಾತದ ನಿವ್ವಳ ವಿದೇಶಿ ಆಸ್ತಿಗಳನ್ನು ಕನಿಷ್ಠವಾಗಿ ಹೊಂದಿರಬೇಕೆಂದು ಸೂಚಿಸಬೇಕು ಎಂದು ಸಮಿತಿಯು ಶಿಫಾರ್ಸು ಮಾಡಿದೆ.

(6) ಹಣಕಾಸಿನ ವ್ಯವಸ್ಥೆಯನ್ನು ಬಂ.ಖಾ.ಪ.ಗೆ ತಯಾರಿಸಲು ಸಮಿತಿಯು ನೀಡಿರುವ ಹಲವು ಸಲಹೆಗಳು ಹೀಗಿವೆ—ಹಣಕಾಸಿನ ವ್ಯವಸ್ಥೆಯಲ್ಲಿ ಭಾಗವಹಿಸುವವರಿಗೆ ಸಮಾನ ಅವಕಾಶಗಳನ್ನು ಕಲ್ಪಿಸುವುದು : .ಮಾರುಕಟ್ಟೆ ತುಕ್ಕಡಿಗಳಿಗೆ ಅವಕಾಶ ಕೊಡದಿರು ವುದು, ಮೀಸಲಿನ ಅಗತ್ಯಗಳಿಗೆ ನಿವಾಸಿ ಮತ್ತು ಅನಿವಾಸಿ ಹೊಣೆ ಗಳನ್ನು ಸಮಾನವಾಗಿ ಪರಿಗಣಿಸುವುದು, ಹಣಕಾಸಿನ ವ್ಯವಸ್ಥೆ ಯಲ್ಲಿ ನಷ್ಟಸಂಭಾವ್ಯತೆಯ ನಿರ್ವಹಣಾ ವ್ಯವಸ್ಥೆಯನ್ನು ಸುಧಾರಿ ಸುವುದು, ಹೆಚ್ಚು ಕಟ್ಟುನಿಟ್ಟಾದ ಬಂಡವಾಳ ಪರ್ಯಾಪ್ತತೆ ಪ್ರಮಿತಿಗಳನ್ನು ಮತ್ತು ವಿವೇಕಯುತ ಪ್ರಮಿತಿಗಳನ್ನು ಪರಿಚಯಿಸುವುದು, ಪರಿಣಾಮಾತ್ಮಕವಾದ ಮೇಲ್ವಿಚಾರಣಾ ವ್ಯವಸ್ಥೆಯನ್ನು ಒದಗಿಸುವುದು ಮತ್ತು ಬ್ಯಾಂಕುಗಳಿಗೆ ಹಾಗೂ ಹಣಕಾಸು ಸಂಸ್ಥೆಗಳಿಗೆ ಹೆಚ್ಚು ಸ್ವಾಯತ್ತತೆ ಯನ್ನು ನೀಡು ವುದು.

ಹೀಗೆ ಆರ್ಥಿಕ ಮತ್ತು ಹಣಕಾಸಿನ ವ್ಯವಸ್ಥೆಯನ್ನು ತಯಾರಿಸಿದ ನಂತರ ವಿವಿಧ ಕ್ಷೇತ್ರದ ಸಂಸ್ಥೆಗಳಿಗೆ ಸೂಕ್ತವಾದ ರೀತಿಯಲ್ಲಿ ಬಂ.ಖಾ.ಪ.ಯನ್ನು ಪರಿಚಯಿಸಲು ವೇಳಾಪಟ್ಟಿಯನ್ನು ಮತ್ತು ಪ್ರಾರಂಭಿಕ ಮೂರು ವರ್ಷಗಳಲ್ಲಿ ಜಾರಿಗೊಳಿಸಬೇಕಾದ ಕ್ರಮಗಳ ಸರಣಿಯನ್ನು ಸಮಿತಿಯು ಸೂಚಿಸಿದೆ. ಹಂತ ಹಂತವಾಗಿ ಕೈಗೊಳ್ಳಬೇಕಾದ ಕ್ರಮಗಳನ್ನು ಸೂಚಿಸುವಾಗ ಸಮಿತಿಯು ಆಯ್ಕೆ ಮಾಡಿರುವ ಸಂಸ್ಥೆಗಳ ಪಟ್ಟಿ ಹೀಗಿದೆ :

1 ನಿವಾಸಿ ಮತ್ತು ಅನಿವಾಸಿ ವ್ಯಾವಹಾರಿಕ ನಿಗಮಗಳು
2 ನಿವಾಸಿ ಮತ್ತು ಅನಿವಾಸಿ ಬ್ಯಾಂಕುಗಳು
3 ನಿವಾಸಿ ಮತ್ತು ಅನಿವಾಸಿ ಬ್ಯಾಂಕೇತರ ಹಣಕಾಸಿನ ಸಂಸ್ಥೆ ಗಳು
4 ನಿವಾಸಿ ಮತ್ತು ಅನಿವಾಸಿ ವ್ಯಕ್ತಿಗಳು
5 ಹಣಕಾಸಿನ ಮಾರುಕಟ್ಟೆಗಳು

ಬ್ಯಾಂಕುಗಳ ವ್ಯವಹಾರಗಳಲ್ಲಿ ಬಂಡವಾಳ ಖಾತೆ ಪರಿವರ್ತನೀಯ ತೆಯ ಅಗತ್ಯವಿರುವ ವಹಿವಾಟುಗಳು ಹೀಗಿವೆ :

1 ವಿದೇಶಿ ಬ್ಯಾಂಕುಗಳಿಂದ ಪಡೆದ ಸಾಲಗಳು ಮತ್ತು ಮೀರೆಳೆತ ಗಳು
2 ವಿದೇಶಿ ಮಾರುಕಟ್ಟೆಗಳಲ್ಲಿ ಹೂಡಿಕೆಗಳು
3 ವಿದೇಶದಲ್ಲಿರುವ ಭಾರತದ ಪಾಲುದಾರಿಕೆ ಸಂಸ್ಥೆಗಳಿಗೆ ಮತ್ತು ಭಾರತೀಯ ಮಾಲಿಕತ್ವದ ಅಂಗಸಂಸ್ಥೆಗಳಿಗೆ ಒದಗಿಸುವ ನಿಧಿ ಆಧಾರಿತ ಮತ್ತಿತರ ನಿಧಿಯೇತರ ಸೌಲಭ್ಯ ಗಳು
4 ಭಾರತದಿಂದ ಸರಕು ಸೇವೆಗಳನ್ನು ಕೊಳ್ಳಲು ಬ್ಯಾಂಕುಗಳಿಗೆ ಮತ್ತು ಕೊಳ್ಳುವವರಿಗೆ ಉದರಿ ಮತ್ತು ಆಮದುದಾರರಿಗೆ ಹಣಕಾಸನ್ನು ಒದಗಿಸುವ ಒಪ್ಪಿಗೆಗಳು ಹಾಗೂ ವಿದೇಶಿ ವ್ಯವಹಾರ ಯೋಜನೆಗಳಿಗೆ ಹಣಕಾಸಿ ಸೌಲಭ್ಯಗಳು
5 ವ್ಯಕ್ತಿಗಳಿಂದ ವಿದೇಶಿ ಚಲಾರ್ಥದ ಠೇವುಗಳ ಸ್ವೀಕಾರ ಹಾಗೂ ವಿದೇಶಿ ಚಲಾರ್ಥದ ಸಾಲನೀಡಿಕೆ
6 ಅನುಪಾಶ್ರಯಣೀಕರಣ ರಫ್ತು ಉದರಿಯಲ್ಲಿ ಬಳಸುವ ಒಂದು ಸಂಲೇಖ

ಭಾರತದಲ್ಲಿ ಬಂ.ಖಾ.ಪ.ಯನ್ನು ಪರಿಚಯಿಸಿದ ನಂತರ :

ಹಣದುಬ್ಬರ ದರದ ಮೇಲೆ ಹತೋಟಿ, ಬ್ಯಾಂಕಿನ ಬಡ್ಡಿದರಗಳ ಕಡಿತ ಮತ್ತು ನಿಯಂತ್ರಣಗಳ ಸಡಿಲಿಕೆ ಹಾಗೂ ನಗದು ಮೀಸಲಿನ ಅನುಪಾತದಲ್ಲಿ ಕಡಿತ ಇತ್ಯಾದಿ ಮುಂ ಪರತ್ತುಗಳ ಪೂರೈಕೆಗಾಗಿ ನಮ್ಮ ದೇಶದಲ್ಲಿ ಹಿಂದಿನ 6 ತಿಂಗಳುಗಳಿಂದ ಕ್ರಮಗಳನ್ನು ಕೈಗೊಂಡಿದೆ. ಈ ಮಧ್ಯೆ ದೇಶದ ರಾಜಕೀಯ ರಂಗದಲ್ಲಿ ಅಸ್ಥಿರತೆಯು ಮೂಡಿ, ಈಗ ಲೋಕ ಸಭೆಯ ಅಭ್ಯರ್ಥಿಗಳ ಚುನಾವಣಾ ಅಬ್ಬರವು ಎಲ್ಲೆಲ್ಲೂ ಕೇಳಿ ಬರುತ್ತಿದೆ. ಅಂತರರಾಷ್ಟ್ರೀಯ ಹಣಕಾಸಿನ ಕ್ಷೇತ್ರದಲ್ಲಿ ಅನಿರೀಕ್ಷಿತ ಬದಲಾವಣೆಗಳು ತಲೆದೋರಿ ಏರುಪೇರುಗಳಾಗಿವೆ. ಇಂಡೊ ನೇಷ್ಯ ಥೈಲೆಂಡ್, ಕೊರಿಯ, ಮಲೇಷಿಯ ದೇಶಗಳಲ್ಲಿ ಜಾರಿ ಗೊಳಿಸಿದ ಆರ್ಥಿಕ ಸುಧಾರಣೆ ಮತ್ತು ಉದಾರೀಕರಣಗಳು ನಿರೀಕ್ಷಿಸಿದಂತೆ ಫಲಕಾರಿಯಾಗದೆ ಆರ್ಥಿಕ ಬಿಕ್ಕಟ್ಟು ಉದ್ಭವಿಸಿದೆ. ಇಂಥ ಬಿಕ್ಕಟ್ಟುಗಳು ಉದಾರೀಕರಣದ ಪ್ರಕ್ರಿಯೆಗಳನ್ನು ಜಾರಿ ಗೊಳಿಸಿರುವ ದೇಶಗಳಿಗೆಲ್ಲ ಅಂಟುಜಾಡ್ಯದಂತೆ ಹರಡಲು ಹೆಚ್ಚು ಕಾಲ ಬೇಕಿಲ್ಲ ಎಂಬುದು ಕೆಲವರ ಅಭಿಪ್ರಾಯವಾಗಿದೆ. ಆದ್ದರಿಂದ ಭಾರತವು ಬಹಳ ಜಾಗರೂಕತೆಯನ್ನು ವಹಿಸಬೇಕು ಎಂದು ಹೇಳು ತ್ತಲೇ ಇದ್ದಾರೆ. ಆದರೆ ಇಂದಿನ ಪರಿಸ್ಥಿಯನ್ನು ಕುರಿತು ಎಸ್. ಎಸ್. ತಾರಾಪುರ್ ಅವರ ಹೇಳಿಕೆ ಹೀಗಿದೆ—ಭಾರತದಲ್ಲಿ ಬಂ. ಖಾ.ಪ.ಯ ಕಾರ್ಯಕ್ರಮಗಳನ್ನು ಕೈಬಿಡದೆ ಮುಂದುವರಿಸುವುದೇ ಸೂಕ್ತವಾಗಿದೆ. ನಮ್ಮ ಆರ್ಥಿಕತೆಯಲ್ಲಿ ದೃಢತೆ ಇರುವುದರಿಂದ ಮತ್ತು ಸಾಂಸ್ಥಿಕ ಚೌಕಟ್ಟಿನಲ್ಲಿ ಶಿಸ್ತಿನ ಕ್ರಮಗಳನ್ನು ಫಲಕಾರಿ ಯಾಗಿ ಕೈಗೊಳ್ಳುವ ಅವಕಾಶಗಳಿರುವುದರಿಂದ, ಅನಿರೀಕ್ಷಿತ ಪರಿಸ್ಥಿತಿಗಳನ್ನು ಎದುರಿಸುವ ಸಾಮರ್ಥ್ಯವಿದೆ. ಹಣಕಾಸಿನ ವ್ಯವಸ್ಥೆಯು ದುರ್ಬಲವಾಗಿದ್ದರೆ ಉದಾರೀಕರಣದ ನಂತರ (ಹಲವು ದೇಶಗಳಲ್ಲಿ ತಲೆದೋರಿರುವ) ಆರ್ಥಿಕ ಬಿಕ್ಕಟ್ಟು ಉಂಟಾ ಗುತ್ತದೆ. ಆದ್ದರಿಂದ ಭಾರತದಲ್ಲಿ ಸುದೃಢವಾದ ಹಣಕಾಸಿನ ವ್ಯವಸ್ಥೆಯನ್ನು ಹೊಂದಲು ಅಗತ್ಯವಾಗಿರುವ ಕ್ರಮಗಳನ್ನು ಸಂದರ್ಭಕ್ಕೆ ತಕ್ಕಂತೆ ಜಾರಿಗೊಳಿಸಬೇಕಾಗಿದೆ.

ಬಂಡವಾಳ ಖಾತೆ ಪರಿವರ್ತನೀಯತೆ ಸಮಿತಿಯ ಅಧ್ಯಕ್ಷರಾದ ಶ್ರೀ ಎಸ್. ಎಸ್. ತಾರಾಪುರ್ ಅವರ ನಿಲುವು ಹೀಗಿದ್ದರೆ, ಪರಿವರ್ತನೀಯತೆಯ ಫಲಾನುಭವಿಗಳಲ್ಲೊಂದಾದ ವಾಣಿಜ್ಯ ಬ್ಯಾಂಕುಗಳ ಅನುಭವಗಳು ಪತ್ರಿಕಾ ವರದಿಗಳ ಪ್ರಕಾರ ಹೀಗಿವೆ :

- ಅ ಬ್ಯಾಂಕು ಸಾಲಗಳ ಬಡ್ಡಿದರಗಳನ್ನು ಇಳಿಸಿದರೂ ಲಾಭ ದಾಯಕ ಸಾಲಗಳಿಗೆ ಬೇಡಿಕೆಗಳು ನಿರೀಕ್ಷಿಸಿದ ಮಟ್ಟದಲ್ಲಿಲ್ಲ.
- ಆ ಠೇವುಗಳಿಗೆ ನೀಡುವ ಬಡ್ಡಿದರಗಳ ಕಡಿತದಿಂದ, ಠೇವಣಿ ದಾರರು ಅಧಿಕ ಬಡ್ಡಿ ನೀಡುವ ಖಾಸಗಿ ಸಂಸ್ಥೆಗಳು, ಬ್ಯಾಂಕೇತರ ಸಂಸ್ಥೆಗಳು ಮತ್ತು ನಿಗಮಗಳನ್ನು ಒಲಿಯು ತ್ತಿದ್ದಾರೆ.
- ಇ ನಗದು ಮೀಸಲಿನ ಅನುಪಾತದಲ್ಲಿ ಕಡಿತದಿಂದ ದೇಶದ ಬ್ಯಾಂಕುಗಳ ವ್ಯವಸ್ಥೆಯಲ್ಲಿ ಹಣದ ಪೂರವೇ ಹರಿದು ಬಡ್ಡಿ ದರಗಳನ್ನು ಇಳಿಸಿದರೂ, ಸಾಲಗಳಿಗೆ ಬೇಡಿಕೆ ಇಲ್ಲದೆ, ಉತ್ಪಾದನ ಹೂಡಿಕೆಗಳಿಗೂ ಬಳಕೆಯಾಗದೆ ಹಣದ ರಾಶಿ ಕೊಳೆಯುವಂತಾಯ್ತು : ಬ್ಯಾಂಕಿನ ಸಾಲಗಳ ವಸೂಲಿ ಕಾರ್ಯಗಳು ತೃಪ್ತಿಕರವಾಗಿಲ್ಲದೆ ಒಂದು ಪ್ರಧಾನ ಸಮಸ್ಯೆ ಯಾಗಿ ಮುಂದುವರಿದಿದೆ.

ಈ ವಿದೇಶಿ ಮತ್ತು ಖಾಸಗಿ ಬ್ಯಾಂಕುಗಳು ಠೇವುಗಳನ್ನು ಆಕರ್ಷಿಸಲು ಅಪಾರ ವೆಚ್ಚದಲ್ಲಿ ಹಲವಾರು ಮಾರುಕಟ್ಟೆ ಕಲಾಪ ಗಳಲ್ಲಿ ತೊಡಗಿರುವುದರಿಂದ ಸರ್ಕಾರಿ ವಲಯದ ಬ್ಯಾಂಕುಗಳ ಠೇವು ಸಂಗ್ರಹಣಾ ಕಾರ್ಯಗಳಿಗೆ ಅಪಾಯ ಒದಗಿದೆ. ಆಧುನಿಕ ತಂತ್ರ ಜಾಲಗಳನ್ನು ಹೊಂದಿರುವ ವಿದೇಶೀ ಬ್ಯಾಂಕುಗಳು ಸಿರಿವಂತ ಠೇವಣಿದಾರರನ್ನು ಸೆಳೆಯುತ್ತಿರುವುದರಿಂದ, ದೇಶಿ ಬ್ಯಾಂಕುಗಳ ವ್ಯವಹಾರಗಳಿಗೆ ಅನೇಕ ಸಮಸ್ಯೆಗಳನ್ನು ತಂದೊಡ್ಡಿವೆ, ಬ್ಯಾಂಕುಗಳ ವ್ಯವಹಾರಗಳಿಗೆ ತಟ್ಟುತ್ತಿರುವ ಅಪಾಯಗಳನ್ನು ತಡೆಯಲು ಈಚೆಗೆ ಭಾರತೀಯ ರಿಸರ್ವ್ ಬ್ಯಾಂಕು ನಗದು ಮೀಸಲಿನ ಅನುಪಾತವನ್ನು ಹೆಚ್ಚಿಸುವುದರ ಜತೆಗೆ ಬ್ಯಾಂಕು ಬಡ್ಡಿ ದರಗಳನ್ನು ಏರಿಸಿದೆ.

ಕಡೆಗೆ ಶ್ರೀಸಾಮಾನ್ಯರ ಸ್ಥಿತಿಯನ್ನು ಸ್ವಲ್ಪವಾದರೂ ತಿಳಿಯಲೇ ಬೇಕು. ಹಣದುಬ್ಬರ ದರ ಕಡಿಮೆಯಾಗಿದೆ ಎಂದು ಘೋಷಿಸಿ ದರೂ ಆಹಾರ ಪದಾರ್ಥಗಳ ಬೆಲೆಗಳು ಏರುತ್ತಿವೆ. ಜತೆಗೆ ಆದಾಯ ಕರ ಜಾಲವು ಎಲ್ಲೆಡೆಯೂ ಹರಡಿದೆ. ಸ್ವಯಂ ಘೋಷಿತ ಆದಾಯ ಯೋಜನೆಯಡಿಯಲ್ಲಿ ಮನೆ, ಮೋಟಾರ್ ಕಾರು, ಟೆಲಿಫೋನ್ ಮಾಲಿಕರು ಹಾಗೂ ವಿದೇಶಕ್ಕೆ ಪ್ರವಾಸ ಹೋದವರಿಂದ ಆದಾಯ ಕರ ವಸೂಲಿ ಆಗುತ್ತಿದೆ. ಈವರೆಗೆ ಆದಾಯ ಕರ ಕಛೇರಿಯ ಕಡೆ ಸುಳಿಯದವರನ್ನು ಆದಾಯ ಕರ ವಿಭಾಗವು ತನ್ನ ಜಾಲದೊಳಗೆ ಸೇರಿಸಿಕೊಂಡಿದೆ. ಆರ್ಥಿಕ ಸುಧಾ ರಣೆ ಹಾಗೂ ಉದಾರೀಕರಣದ ಸಂದರ್ಭದಲ್ಲಿ ಕೇಂದ್ರ ಸರ್ಕಾರವು ವಿತ್ತೀಯ ಕೊರತೆಯನ್ನು ನೀಗಲು ಈ ಕ್ರಮ ಕೈಗೊಂಡಿದೆ ಎಂದು ವರದಿಯಾಗಿದೆ. ಹೀಗಿರುವುದರಿಂದ ಭಾರತದಲ್ಲಿ ಉದಾರೀಕರಣದ ಪಂಡಿತರು ಶ್ರೀಸಾಮಾನ್ಯರ ಮತ್ತು ದುರ್ಬಲ ವರ್ಗದವರ ಕೆಲವು ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರ ನೀಡಬಲ್ಲರೆ ? ದೈನಿಕ ಅಗತ್ಯ ವಸ್ತು ಮತ್ತು ಸೇವೆಗಳ ಬೆಲೆಗಳನ್ನು ಹತೋಟಿಯಲ್ಲಿಡಲು ಸಾಧ್ಯವೆ ? ಇವುಗಳ ಬೆಲೆಗಳನ್ನು ಇಳಿಸಲು ಸಾಧ್ಯವೆ ? ಮಧ್ಯಮ ವರ್ಗದವರ ಮತ್ತು ಕೆಳ ವರ್ಗದ ನೌಕರರ ಸಂಬಳ ಮತ್ತು ಭತ್ಯೆ ಗಳನ್ನು ಸಾಕಷ್ಟು ಏರಿಸಲು ಸಾಧ್ಯವೆ ? ನಮ್ಮ ಬಡ ಜನತೆಯ ಕುಂದು ಕೊರತೆಗಳನ್ನು ನೀಗಲು ಸಾಧ್ಯವೆ ?

★

# ವ್ಯಾಘ್ರ ರಾಷ್ಟ್ರಗಳ ಬಿಕ್ಕಟ್ಟು

**ಪ್ರೊ. ಸಿ. ಗೋವಿಂದಾಚಾರ್**

ವಾಣಿಜ್ಯ ಪ್ರಾಧ್ಯಾಪಕರು, ಆಚಾರ್ಯ ಪಾಠಶಾಲಾ ಕಾಲೇಜು, ಬೆಂಗಳೂರು

---

ಮರಳ ಮೇಲೆ ಕಟ್ಟಿದ ಕಟ್ಟಡ ಎಂದಿದ್ದರೂ ಕುಸಿಯುವುದೇ. ತತ್ಕಾಲದಲ್ಲಿ ಅದು ನೋಡಲು ಚೆನ್ನ. ಅಲ್ಪಾವಧಿ ಹಣ ಹರಿವಿನ ಬಲದ ಮೇಲೆ ಅಭದ್ರ ಹಣಕಾಸು ವ್ಯವಸ್ಥೆಯನ್ನು ನೆಚ್ಚಿ, ತಾವು ಅಜೇಯವೆಂದು ಭಾವಿಸಿದ್ದ ಅನೇಕ ದೇಶಗಳ ಅರ್ಥವ್ಯವಸ್ಥೆಗಳು ಈಚೆಗೆ ಕುಸಿದಿವೆ. ಅವುಗಳ ಕರೆನ್ಸಿಗಳು ಪಾತಾಳಕ್ಕೆ ಬಿದ್ದಿವೆ. ಏಕೆ ಹೀಗಾಯಿತು ? ಉತ್ತರ ಈ ಲೇಖನದಲ್ಲಿದೆ.

---

ಯಾವುದೂ ಶಾಶ್ವತವಲ್ಲ ಎಂಬ ಮಾತಿದೆ. ಅಮೆರಿಕಾ ಸಂಯುಕ್ತ ಸಂಸ್ಥಾನದ ಸಿರಿವಂತಿಕೆಗೂ ಇದು ಅನ್ವಯಿಸುವುದು. ವಿಶ್ವದಲ್ಲೇ ಪ್ರಥಮ ವಿಶಾಸಲು ಚಲಾರ್ಥ ಎಂದು ಡಾಲರ್ ಮೆರೆದ ಕಾಲ ಒಂದಿತ್ತು. ಏಕೆಂದರೆ ಇದರ ಚಲಾರ್ಥಗಳು ಡಾಲರ್‌ಗೆ ಕೀಲನೆಯಂತೆ ಬಿಗಿಯಲ್ಪಟ್ಟಿತ್ತು. 70ರ ದಶಕದಲ್ಲಿ ಈ ವ್ಯವಸ್ಥೆ ತಪ್ಪಿತು. ವಿಶ್ವ ಹಣಕಾಸು ಸಂಸ್ಥೆಯ ವಿಶೇಷ ಡ್ರಾಯಿಂಗ್ ಹಕ್ಕಿನಿಂದ ಚರಾತ್ಮಕವಾದ ಚಲಾರ್ಥ ಪದ್ಧತಿ ಮೂಡಿ ಬಂತು. ಚಲಾರ್ಥಗಳ ಮೌಲ್ಯ ನಿರ್ಧಾರ ಪೇಟೆ ಪ್ರಸಂಗಗಳ ಮೇಲೆ ಆಧಾರಗೊಂಡಿತು. ಆದರೆ ಲ್ಯಾಟಿನ್ ಅಮೇರಿಕಾ ವ್ಯಾಘ್ರರಾಷ್ಟ್ರಗಳಲ್ಲೊಂದಾದ ಮೆಕ್ಸಿಕೋಗೆ ಅಮೇರಿಕಾ ಎಂದರೆ "ಹಿರಿಯಣ್ಣ" ಎಂಬ ಅಭಿಮಾನವಿತ್ತು. ಪೆಸೊ ಡಾಲರ್‌ಬಾಂಧವ್ಯತುಂಬಾದೀರ್ಘವಾದುದು. ಚಲಾರ್ಥಗಳ ಕೀಲನ ವ್ಯವಸ್ಥೆಯಿಂದ ವಿದೇಶಿ ವಿನಿಮಯದಲ್ಲಿ ನಷ್ಟ ಅಸಂಭವ ಹಾಗೂ ಬ್ಯಾಂಕುಗಳಿಗೆ ಉತ್ತೇಜಕಾರಿ ಎಂಬ ನಂಬಿಕೆ ಇತ್ತು. 94ರ ಸುಮಾರಿಗೆ ಮೆಕ್ಸಿಕೋ ಉದಾರೀಕರಣಕ್ಕೆ ವಾಲಿತು. ಬಿಕ್ಕಟ್ಟಿಗೆ ಸಿಲುಕಿತು. ಲಾಭ ತರದ 18 ಬ್ಯಾಂಕುಗಳನ್ನು ಖಾಸಗೀಕರಿಸಿತು. ಪತ್ತು ನಿಯಂತ್ರಣ, ಸಾಲ ನಿರ್ಬಂಧಗಳನ್ನು ಶಾಸನಬದ್ಧಗೊಳಿಸುವುದು, ವಿಶಾಸಲು ಅನುಪಾತ ಎಲ್ಲವನ್ನೂ ತೆಗೆದುಹಾಕಿತು. ಬ್ಯಾಂಕಿಂಗ್ ಸಡಿಲೀಕರಣದಿಂದ ನಷ್ಟತರುವ ಆಸ್ತಿ ಹೆಚ್ಚಾಗಿ ಸರ್ಕಾರವೇ ಅದನ್ನು ಭರಿಸಬೇಕಾಗಿ ಬಂತು. ಶೇಕಡಾ 13ರಷ್ಟು ಪೆಸೊನ ಅಪಮೌಲ್ಯವನ್ನು ಯೋಜಿಸಿತು. ಆದರೆ ಆದದ್ದೇ ಬೇರೆ–(ಕೋಷ್ಟಕ ನೋಡಿ)–ಮುನ್ಸೂಚನೆ ಕಂಡ ದೇಶಿ–ವಿದೇಶಿ ಗ್ರಾಹಕರು ತಮ್ಮ ಗಳಿಕೆಯನ್ನು ಪರಿವರ್ತಿಸಿಕೊಳ್ಳಲು ಧಾವಿಸಿದರು. ಪೆಸೊಗೆ ಹೊಡೆತ ತಾಳಲಾಗಲಿಲ್ಲ. 29 ಬಿಲಿಯನ್ ಡಾಲರ್ ವಿದೇಶಿ ಹಣ ಕರಗಿ, ಏಳು ಬಿಲಿಯನ್ ಆಯಿತು. ಕೆಲವೇ ದಿನಗಳಲ್ಲಿ 8 ಬಿಲಿಯನ್ ಡಾಲರ್ ಹಣ ದೇಶದಿಂದ ಕಾಲ್ತೆಗೆಯಿತು. ಚಾಲ್ತಿ ಖಾತೆ ಕೊರತೆ ಹೆಚ್ಚಾಯಿತು. ಈ ಬಿಕ್ಕಟ್ಟಿನ ಜೊತೆಗೆ ಮತ್ತೊಂದು ಅಂಟಿಕೊಂಡಿತು. ರಾಷ್ಟ್ರಾಧ್ಯಕ್ಷ ಸ್ಥಾನಕ್ಕೆ ನಿಂತಿದ್ದ ಕೊಲೊಸೊ ಎಂಬ ಅಭ್ಯರ್ಥಿಯ ಹತ್ಯೆಯಿಂದ ರಾಜಕೀಯ ಪರಿಸ್ಥಿತಿ ಹದಗೆಟ್ಟಿತು. ಯಾವುದೋ ಒಂದು ಪ್ರಾಂತ್ಯದ ಮೂಲೆಯಿಂದ ಉಗಮವಾದ ಈ ಬಿಕ್ಕಟ್ಟನ್ನು "94–ಟೆಕ್ಸಿಲಾ ಬಿಕ್ಕಟ್ಟು" ಎಂದು ಕರೆಯುವರು. ಬಂಡವಾಳದ ಆಗಮ–ನಿರ್ಗಮಗಳು ಯಾವ ರೀತಿ ಸಮಸ್ಯೆಯನ್ನು ತಂದೊಡ್ಡುವುವು ಎನ್ನುವುದಕ್ಕೆ ಮೆಕ್ಸಿಕೋ ಸಾಕ್ಷಿಯಾಗಿದೆ. 1997ರ ಅಂತ್ಯದಲ್ಲಿ ಇದೇ ರೀತಿಯ, ಅಂದರೆ ದ್ರವತ್ವ ಸಮಸ್ಯೆಗೆ ಸಂಬಂಧಪಟ್ಟ, ಬಿಕ್ಕಟ್ಟು ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ಕಂಡಿತು. ಥಾಯ್‌ಲೆಂಡ್, ಇಂಡೋನೇಷಿಯ, ದಕ್ಷಿಣ ಕೊರಿಯಾ, ಮಲೇಷಿಯಾ ದೇಶಗಳನ್ನು ವ್ಯಾಘ್ರರಾಷ್ಟ್ರಗಳೆಂದು ಕರೆಯುವರು. ಯಾವುದೇ ಅಪಾಯವನ್ನು ವ್ಯಾಘ್ರದಂತೆ ದಿಟ್ಟತನದಿಂದ ಎದುರಿಸಿ ಶೀಘ್ರವೇ ಯಥಾಸ್ಥಿತಿಗೆ ತರುವ ಸಾಮರ್ಥ್ಯ ಹೊಂದಿರುವ ರಾಷ್ಟ್ರಗಳಿವು. ಈ ನಿಟ್ಟಿನಲ್ಲಿ ಮೆಕ್ಸಿಕೋ ದೇಶದ 'ಒಂದೇ ಏಟಿನ' ತಂತ್ರಾಧಾರಿತವಾದ ಸುಧಾರಣೆ ಉಲ್ಲೇಖಾರ್ಹ. ಬಿಕ್ಕಟ್ಟಿಗೆ ಮುಂಚೆ ನಿಯಂತ್ರಣೆಯ ಸಡಿಲೀಕರಣದಿಂದಾಗಿ ಈ ರಾಷ್ಟ್ರಗಳು ವಿದೇಶಿ ಹಣವನ್ನು ಚೆನ್ನಾಗಿ ಅನುಭವಿಸಿದವು. ಇವುಗಳ ಚಲಾರ್ಥ ಡಾಲರ್‌ಗೆ ಬಿಗಿಯಲ್ಪಟ್ಟಿತ್ತು. ಶೀಘ್ರ ಪ್ರಗತಿಯೂ ಸಾಧ್ಯವಾಯಿತು. ಕ್ರಮೇಣ ಸಮಸ್ಯೆ ಎದುರಿಸಬೇಕಾಗಿ ಬಂತು. ಇದಕ್ಕೆ ವಿಶ್ವ ಹಾಗೂ ದೇಶದ ಬ್ಯಾಂಕುಗಳ ಹೊಟ್ಟೆಬಾಕತನವೂ ಸ್ವಲ್ಪ ಕಾರಣ. ಲಾಭದಾಸೆಯಿಂದ ಜರ್ಮನ್–ಅಮೇರಿಕಾ ಬ್ಯಾಂಕುಗಳು ಈ ರಾಷ್ಟ್ರಗಳಿಗೆ ಧಾರಾಳವಾಗಿ ಹಣ ರವಾನಿಸಿದವು. ಆದರೆ ಇಲ್ಲಿನ ಆಂತರಿಕ ಬ್ಯಾಂಕಿಂಗ್ ಅವ್ಯವಸ್ಥೆ ಅವುಗಳಿಗೆ ಗೊತ್ತಿರಲಿಲ್ಲ. ನಷ್ಟ ಸಂಭವ ಹೆಚ್ಚಾಗಿರುವ ಹಾಗೂ ಸಟ್ಟಾ ಆಧಾರಿತವಾದ ಪರಿಯೋಜನೆಗಳಲ್ಲಿ ಈ ವಿದೇಶಿ ಹಣವನ್ನು ತೊಡಗಿಸಿ 'ಕೆಟ್ಟ ಸಾಲ ವ್ಯವಹಾರ' ಎಂದೆನಿಸಿಕೊಂಡಿತು. ಈ ಮಹಾಪೂರವನ್ನು ನಿಭಾಯಿಸುವ ತಾಕತ್ತಿಲ್ಲದ್ದರಿಂದ ಚಾಲ್ತಿ

ಖಾತೆ ಕೊರತೆ ಸಮಸ್ಯೆ ಕಾಡಿಸಿತು. ಬ್ಯಾಂಕುಗಳು ವಿದೇಶಿ ಹಣವನ್ನು ಧಾರಾಳವಾಗಿ ಮರು ಸಾಲವಾಗಿ ನಿವೇಶನ, ಕಟ್ಟಡ ನಿರ್ಮಾಣಕ್ಕಾಗಿ ನೀಡಿದುವು. ಥಾಯ್‌ಲೆಂಡ್ ಹಾಗೂ ಮಲೇಷಿಯಾ ಈ ವ್ಯವಹಾರಗಳಲ್ಲಿ ಮಿತಿ ವಿಾರಿವೆ. ಪೇಟೆಯ ಮುಗ್ಗಟ್ಟಿನಿಂದ ಆಸ್ತಿಗಳ ಮೌಲ್ಯ ಹಾಗೂ ಬ್ಯಾಂಕುಗಳು ಕುಸಿದವು. ಬ್ಯಾಂಕುಗಳು ಮತ್ತು ಹಣಕಾಸಿನ ಸಂಸ್ಥೆಗಳು ಸರ್ಕಾರಿ ಖಾತರಿಯ ಬಲದಿಂದಲೇ ಬಿರುಸಿನಿಂದ ವ್ಯಾಪಾರ ಮಾಡಿದುವು. ಸರ್ಕಾರ ಎಂದ ಮೇಲೆ ನಿಯಂತ್ರಣೆ ಇಲ್ಲದಿರುವುದು, ಅಸ್ಪಷ್ಟ ಹೂಡಿಕೆ ನಿರ್ಧಾರಗಳು ಮುಂತಾದವು. ಇದರಿಂದಾಗಿ ಹೆಚ್ಚು ಲಾಭ ಗಳಿಸುವ ಉದ್ದೇಶದಿಂದ ಬ್ಯಾಂಕುಗಳೇ ನಷ್ಟ ಸಂಭವ ಹೆಚ್ಚಾಗಿರುವ ಪರಿಯೋಜನೆಗಳಲ್ಲಿ ಸಾಲ ತೊಡಗಿಸಲು ನಿರ್ಧಾರ ಕೈಗೊಂಡವು. ನಷ್ಟವನ್ನು ಸರ್ಕಾರವೇ ಭರಿಸಬೇಕಾಗಿ ಬಂತು. ಆದರೆ ಸರ್ಕಾರದ ಖಾತರಿ ನೀರಿನ ಗುಳ್ಳೆಯಾಯಿತು. ವಿದೇಶಿ ಹಣದ ಮಹಾಪೂರ ಎಂದ ಮೇಲೆ ಋಣದ ಮಹಾಪೂರ ಎಂದರ್ಥ. ಅಪಮೌಲ್ಯವಾದಲ್ಲಿ ದುಬಾರಿ ಋಣವನ್ನು ತೀರಿಸಬೇಕಾಗುವುದು. ಬೇರೆ ನಿಗಮ ಸಂಸ್ಥೆಗಳು ಲಾಭ ತ್ಯಾಗ ಮಾಡಿದುವು. ಉದರಿ ಮಾಪನ ಸಂಸ್ಥೆಗಳು ಈ ರಾಷ್ಟ್ರಗಳಲ್ಲಿರುವ ಕೆಲವು ಭಾರಿ ಹಾಗೂ ಮಧ್ಯಮ ವರ್ಗದ ಸಂಸ್ಥೆಗಳನ್ನು ಅಧಿಮಾಪನಗೊಳಿಸಿತ್ತು. ಬಿಕ್ಕಟ್ಟು ಸಂಭವದ ಬಗ್ಗೆ ಇವು ಊಹಿಸಿರಲಿಲ್ಲ.

## ಥಾಯ್ಲೆಂಡಿನಲ್ಲಿ ಮೊದಲು

ಪ್ರಪ್ರಥಮವಾಗಿ ಜುಲೈ 2, 1997ರಂದು ಥಾಯ್‌ಲೆಂಡಿನ ಚಲಾರ್ಥ ಬಾಹ್ತ್‌ನ ಅಪಮೌಲ್ಯವಾಯಿತು. ಇಲ್ಲಿಯ ವಿದೇಶಿ ಹಣದಲ್ಲಿ ಶೇಕಡ 90ರಷ್ಟು ಖಾಸಗಿ ವಲಯದಲ್ಲಿ ಕೇಂದ್ರೀಕೃತವಾಗಿದೆ. ಬ್ಯಾಂಕುಗಳು ಆಸ್ತಿಗಳನ್ನು ಜೊತೆಯಾಧಾರವಾಗಿಟ್ಟುಕೊಂಡು ಸಾಲ ಕೊಡುತ್ತಿದ್ದವು. ಹಾಗು ಶೇರುಪೇಟೆಯಲ್ಲಿ ಕಟ್ಟಾವ್ಯಾಪಾರಿಗಳಿಗೂ ಹಣ ಒದಗಿಸುತ್ತಿದ್ದವು. ಸಾಲಗಳು ವಾಪಸಾಗಲಿಲ್ಲ. ಆಸ್ತಿಗಳ ಮೌಲ್ಯ ಇಳಿಯಿತು. ನಿರ್ದಿಷ್ಟ ವಿನಿಮಯ ದರವನ್ನು ಸ್ಥಿರಗೊಳಿಸಲು ಥಾಯ್ ಸರ್ಕಾರ ಕೈಗೊಂಡ ಕ್ರಮ ಸಫಲವಾಗಲಿಲ್ಲ. ಬಾಹ್ತ್‌ನ ಮೌಲ್ಯ ದಿನೇ ದಿನೇ ಕುಸಿಯತೊಡಗಿತು. ಹೂಡಿಕೆದಾರರು ತಮ್ಮ ಹಣವನ್ನು ಗಿಟ್ಟಿಸಿಕೊಂಡು ಕಾಲ್ತೆಗೆದರು. ಒಮ್ಮೆ ಮಹಾಪೂರದಂತೆ ಆಗಮಿಸಿದ ವಿದೇಶಿ ಹಣ ಇನ್ನೂ ಹೆಚ್ಚು ವೇಗವಾಗಿ ನಿರ್ಗಮಿಸಿತು. ಅಪಮೌಲ್ಯ ಎಂದಮೇಲೆ ಹಣದುಬ್ಬರ, ಕೆಲವು ಕ್ಷೇತ್ರಗಳಲ್ಲಿ ಬೇಡಿಕೆ ಕೊರತೆ, ದುಬಾರಿ ಆಮದು-ರಫ್ತು ವ್ಯಾಪಾರದಲ್ಲಿ ಕುಸಿತ, ರಾಷ್ಟ್ರೀಯ ವರಮಾನ ಹಾಗೂ ಶೇರು ಸೂಚಿಯಲ್ಲಿ ಇಳಿಮುಖ ಇತ್ಯಾದಿ ಸರಪಳಿಕೊಂಡಿಯಂತಹ ಪರಿಣಾಮಗಳು. ಇವೆಲ್ಲಾ ಪುಸ್ತಕ ಬದನೆಕಾಯಿ. ಇವಿಷ್ಟೇ ಆದರೆ ಸಮಸ್ಯೆ ತೀವ್ರ ಆಗದು. ಏಕೆಂದರೆ ಕೇಂದ್ರ ಬ್ಯಾಂಕ್ ಕ್ರಮಗಳಿಂದ ಸಮಸ್ಯೆ ಬಗೆಹರಿಸಬಹುದು. ಆದರೆ ಏಷ್ಯಾ ಬಿಕ್ಕಟ್ಟಿಗೆ ಬೇರೆ ಬಲವಾದ ಕಾರಣಗಳಿವೆ. ಹದಗೆಟ್ಟ ರಾಜಕೀಯ, ಸಡಿಲವಾದ ಕಾನೂನಿನ ಚೌಕಟ್ಟು, ಆಂತರಿಕ (ಅ)ವ್ಯವಹಾರಗಳು, ಅಸ್ಥಿರ ಸರ್ಕಾರ ಮುಂತಾದ ಕಾರಣಗಳಿಂದ ಬಿಕ್ಕಟ್ಟು ಆಳವಾಯಿತು. ಒಂದಾನೊಂದು ಕಾಲದಲ್ಲಿ ಈ ರಾಷ್ಟ್ರಗಳಲ್ಲಿದ್ದ ಶಿಸ್ತು, ನಿಯಮ 'ಏಷ್ಯಾ ಮಾದರಿ' ಎಂದು ಪ್ರಸಿದ್ಧಿ ಆಗಿತ್ತು. ಥಾಯ್‌ಲೆಂಡಿನಲ್ಲಿ ಆಗಿಂದಾಗ್ಗೆ ಸಂಭವಿಸುವ ಮಿಲಿಟರಿ ಬಂಡಾಯ, ಮಿಲಿಟರಿ ಅಧಿಕಾರಿಗಳ ಲಂಚಗುಳಿತನ, ಚಲಾರ್ಥಗಳ ಕಳ್ಳಸಾಗಣೆ, ಸಟ್ಟಾ ವ್ಯಾಪಾರ ಇಡೀ ದೇಶವನ್ನೇ ಕತ್ತಲಲ್ಲಿರಿಸಿದುವು.

## ಏಷ್ಯಾ ಫ್ಲೂ

ಥಾಯ್‌ಲೆಂಡಿನಲ್ಲಿದ್ದ ಈ ಸಾಂಕ್ರಾಮಿಕ ರೋಗ ನೆರೆ ರಾಷ್ಟ್ರಗಳಿಗೆ ಹರಡಿ 'ಏಷ್ಯಾ ಫ್ಲೂ' ಆಯಿತು. ಮೊದಲ ರೋಗಿ ಮಲೇಷಿಯಾ. ಸರ್ಕಾರಿ–ಖಾಸಗಿ ಋಣಭಾರ ಗಗನಕ್ಕೇರಿತು. ಚಲಾರ್ಥ ರಿಂಗಿಟ್‌ನ ಮೌಲ್ಯ ಕುಸಿಯಿತು. ಬಡ್ಡಿದರ ಒಂದೇ ಸಮ ಏರಿತು. ಈ ಬಿಕ್ಕಟ್ಟಿನ ಜೊತೆಗೆ 1ಲಕ್ಷ ನಿರಾಶ್ರಿತರ ಸಮಸ್ಯೆ ಸೇರಿಕೊಂಡಿತು.

ಇಂಡೋನೇಷಿಯಾದಲ್ಲಿ ಪ್ರಜಾಪ್ರಭುತ್ವದ ಆಳ್ವಿಕೆ ದೂರ. 50 ಬಿಲಿಯನ್ ಡಾಲರ್‌ಗೆ ಒಡೆಯನಾದ ಅಧ್ಯಕ್ಷ ಸುಹಾರ್ತೊವಿನ ಸರ್ವಾಧಿಕಾರವೇ ಪ್ರಬಲವಾದುದು. ರಾಷ್ಟ್ರವು ಇವನ ಖಾಸಗಿ ಸ್ವತ್ತೇನೋ ಎಂಬಂತೆ ಭಾವನೆ. ಅರ್ಥವ್ಯವಸ್ಥೆಯ ಮೇಲೆ ಆಸಕ್ತಿ ವಹಿಸುವುದನ್ನು ಬಿಟ್ಟು ಮನೆತನದ ಪ್ರಗತಿ ಮೇಲೇ ಹೆಚ್ಚು ಶ್ರಮ ವಹಿಸುತ್ತಿದ್ದ. ರಾಜಕೀಯ ಕ್ಷೇತ್ರಕ್ಕೂ ಪಾರಂಪರಿಕವಾಗಿ ನಡೆದುಕೊಂಡು ಬಂದಿರುವ ಉದ್ಯಮಗಳಿಗೂ ನಿಕಟ ಸಂಪರ್ಕವಿದೆ. ಇದರಲ್ಲಿ ಬ್ಯಾಂಕ್ ವಿನಿಯೋಜನೆ, ಸಾಲಗಳ ವ್ಯವಹಾರಗಳು ಸೇರಿವೆ. ಸುಹಾರ್ತೊವಿನ ಕಡೆಯವರಿಗೆ ಬ್ಯಾಂಕ್ ಸಾಲ ಪೂರೈಕೆ ಕಡ್ಡಾಯ. ಸರ್ಕಾರದ ಅನುಮತಿ ಬೇಕಾದ ಯಾವುದೇ ವ್ಯವಹಾರವಾಗಲಿ ಇವನ ಧರ್ಮಪತ್ನಿ ಮೂಲಕ ಶೇಕಡಾ 10 ಕಮಿಷನ್ ಮೇರೆಗೆ ನಡೆಯುತ್ತಿತ್ತು. ಭಾರಿ ವ್ಯಾಪಾರ ಒಪ್ಪಂದಗಳು ಇಲ್ಲಿಂದಲೇ ಮಂಜೂರಾಗಿ ಬರುತ್ತಿದ್ದುವು. 'ಸ್ಟೆಡಿಸೇಫ್' ಎಂಬ ಟ್ಯಾಕ್ಸಿ ಸಂಸ್ಥೆ ಪರೋಕ್ಷವಾಗಿ ಸುಹಾರ್ತೊವಿನ ಸ್ವಾಮಿತ್ವಕ್ಕೆ ಒಳಪಟ್ಟಿತ್ತು. ಈ ಸಂಸ್ಥೆ ಹಾಂಕಾಂಗ್‌ನ ಪೆರಿಗ್ರೈನ್ ಎಂಬ ವಣಿಕ ಬ್ಯಾಂಕಿನಿಂದ 270 ಮಿಲಿಯನ್ ಡಾಲರ್ ಸಾಲ ಪಡೆದು ತೀರಿಸಲಿಲ್ಲ. ಪೆರಿಗ್ರೈನ್ ಸಂಸ್ಥೆ ದಿವಾಳಿ ಮಾರ್ಗ ಹಿಡಿಯಿತು. ಬೇರೆ ಸಾಲಿಗರ ಪರದಾಟ ಹೇಳಲೇಬೇಕಾಗಿಲ್ಲ. ಸುಹಾರ್ತೊ ಕಡೆಯವರಿಗೆ ಸಾಲ ಕೊಟ್ಟರೆ ಸರ್ಕಾರಿ ಖಾತರಿ ಇರುವುದೆಂದು ನಂಬಿ ವಿದೇಶಿ ಹೂಡಿಕೆದಾರರು ಮೋಸ ಹೋದರು. ರುಪೈಯದ ಕುಸಿತ (8 ತಿಂಗಳ ಅವಧಿಯಲ್ಲಿ ಶೇಕಡಾ 85ರಷ್ಟು. ಜೂನ್ 97ರಲ್ಲಿ ಡಾಲರ್ ಒಂದಕ್ಕೆ 2000 ರೂ. ಜನವರಿ 98ರಲ್ಲಿ 1600 ರೂ.) ಋಣಭಾರ, ಋಣಸೇವೆ, ನಷ್ಟ ತರುವ ಆಸ್ತಿಗಳು ಮತ್ತು ಆಂತರಿಕ ಕಾರಣಗಳಿಂದ ಬಂಡವಾಳದ ಬುನಾದಿ ಹಾಳಾಯಿತು. ಕಾನೂನಿನ ಚೌಕಟ್ಟು ಬಿಗಿಯಾಗಿಲ್ಲ. ಆದರಲ್ಲೂ ದಿವಾಳಿ ವ್ಯವಹಾರಗಳ ಬಗ್ಗೆ ಕಾಯ್ದೆ ಕೊರತೆ, ಸಂವಹನೆಯ ಅವ್ಯವಸ್ಥೆ ಮುಂತಾದ ಕಾರಣ

ಗಳಿಂದ ಬಿಕ್ಕಟ್ಟು ತೀವ್ರವಾಯಿತು. ಜಾವಾ ಪ್ರಾಂತ್ಯದಲ್ಲಿ ಆಹಾರ, ನೀರಿನ ಕ್ಷಾಮ ಪರಿಸ್ಥಿತಿ ಉಂಟಾಗಿ ಉದ್ರಿಕ್ತ ಗುಂಪು ವ್ಯಾಪಾರದ ಮಳಿಗೆ ಸಂಕೀರ್ಣವನ್ನೇ ನಾಶ ಮಾಡಿತು. ಲಕ್ಷಾಂತರ ಕಾರ್ಮಿಕರಿಗೆ ಕೆಲಸವಿಲ್ಲ ಎಂಬ ನೋಟೀಸ್ ಕೊಡಲಾಗಿ ಎಲ್ಲೆಲ್ಲೂ ಪ್ರತಿಭಟನಾ ಮೆರವಣಿಗೆಗಳು ಕಾಣಿಸಿಕೊಂಡವು.

ಸಾಲ ತೀರಿಸದವನನ್ನು ದಿವಾಳಿ ಎಂದು ಘೋಷಿಸುವುದು ಸುಲಭ ವಲ್ಲ. ಜಕಾರ್ತ ಸಂಯುಕ್ತ ಸೂಚಿಯಲ್ಲಿ ಪಟ್ಟೀಕರಣವಾದ ಸಂಸ್ಥೆ ಗಳು ದಿವಾಳಿ ಮಾರ್ಗ ಹಿಡಿದುವು. 5 ಬ್ಯಾಂಕುಗಳ ವಿಲೀನದಿಂದ ಜೆಸಿಐನಲ್ಲಿ ಇನ್ನಷ್ಟು ಇಳಿಮುಖವಾಯಿತು. ಶೇ. 35 + 6) ಫಿಲಿ ಫೈನ್ಸ್‌ನಲ್ಲಿ ದಿವಾಳಿ ಕಾಯ್ದೆ ಅಮೇರಿಕಾದ ಕಾನೂನಿನ ಚೌಕಟ್ಟಿನ ಮೇಲೆ ಆಧಾರಗೊಂಡಿದೆ. ಆದರೆ ಜಾರಿಯಲ್ಲಿಲ್ಲ. ಜಾರಿಗೆ ತಂದರೂ ವಿಳಂಬಕಾರಿ ಹಾಗೂ ದುಬಾರಿ ದಿವಾಳಿಯಾದ ಸಂಸ್ಥೆಗಳು ಆಸ್ತಿ ಗಳನ್ನು ಯಜಮಾನನ ಕಡೆಯವರಿಗೆ ವರ್ಗಾಯಿಸಬೇಕು. ಸಾಲಿಗ ನಿಗೆ ಏನೂ ಸಿಗದು. ನ್ಯಾಯಾಲಯದಲ್ಲಿ ದಾವೆ ಹೂಡಿ 'ಬಂದಷ್ಟು ಬರಲಿ' ಎಂದು ಕಸಿದುಕೊಂಡವನೆ ಗಟ್ಟಿಗ. ದಕ್ಷಿಣ ಕೊರಿಯಾ ದಲ್ಲಿಯೂ ದಿವಾಳಿ ಕಾಯ್ದೆ ತುಂಬ ವಿಳಂಬಕಾರಿ. ಥಾಯ್‌ಲೆಂಡ್ ಮತ್ತು ಫಿಲಿಫೈನ್ಸ್‌ಗಳಲ್ಲಿ 'ತಪ್ಪಾಯಿತು ಕ್ಷಮಿಸಿ' ಎಂಬ ಎರಡು ಪದಗಳು ಬರುವುದೇ ಹೊರತು, ಸಾಲದ ವಾಪಸಾತಿ ಬಗ್ಗೆ ಸುಳಿವೂ ಇಲ್ಲ. ಆದ್ದರಿಂದ ಬಿಗಿಯಾದ ಕಾನೂನಿನ ವಿಧಾನಗಳ ಕೊರತೆ ಈ ರಾಷ್ಟ್ರಗಳಲ್ಲಿ ಒಂದು ನ್ಯೂನತೆಯೇ ಸರಿ. ಕಾವು ಏರಿದ ಈ ಅರ್ಥವ್ಯವಸ್ಥೆಯಲ್ಲಿ ಸಟ್ಟಾ ವ್ಯಾಪಾರಿಗಳು ಚಲಾರ್ಥಗಳ ಬೆನ್ನೆಲುಬನ್ನೇ ಮುರಿದರು.

### ದಕ್ಷಿಣ ಕೊರಿಯಾ

ಜಪಾನಿಗಿಂತಲೂ ನಾವೇತರಲ್ಲಿ ಕಡಿಮೆ ಎಂಬ ಮನೋಕಲ್ಪನೆ ಹಾಗೂ ಶ್ರಮದ ದುಡಿಮೆಯ ಫಲದಿಂದ ದಕ್ಷಿಣ ಕೊರಿಯ ಇಂದು ವಿಶ್ವದ 11ನೆ ಸಿರಿವಂತ ರಾಷ್ಟ್ರವಾಗಿದೆ. ದೇಶದ ಕೈಗಾರಿಕೋ ದ್ಯಮಗಳು ಸುಮಾರು 30 ವೃಂದ ಸಂಸ್ಥೆಗಳ ಅಧೀನದಲ್ಲಿದೆ. ಇವೇ 'ಕೆಬಾಲ್ಸ್' ಭಾರತದಲ್ಲಿರುವ ಸ್ಯಾಮ್ಸಂಗ್, ಎಲ್‌ಜಿ ಹಾಗೂ ದೇವು ಬಹುರಾಷ್ಟ್ರೀಯ ಸಂಸ್ಥೆಗಳು ಈ ವೃಂದದಲ್ಲಿ ಸೇರಿವೆ. ಕೆಬಾಲ್ಸ್ ಬ್ಯಾಂಕ್ ಸಾಲ ನೀಡುವಲ್ಲಿ ಆದ್ಯತೆ ಮತ್ತು ಸರ್ಕಾರಿ ಖಾತರಿ ಎರಡೂ ಇವೆ. ಋಣ–ಷೇರುಬಂಡವಾಳ ಅನುಪಾತದಲ್ಲಿ 400ರಿಂದ 1000 ವರೆಗೂ ಅಂತರವಿರುವುದು ಇವಕ್ಕೆ ಲಕ್ಷ್ಯವಿಲ್ಲ. ಇದನ್ನು ಉಚ್ಚ ನಷ್ಟಸಂಭಾವ್ಯತಾ ತಂತ್ರ ಎಂದು ಕರೆಯುವರು. ಡಿಸೆಂಬರ್ 97ರ ಸಮಯಕ್ಕೆ 30 ಬಿಲಿಯನ್ ಡಾಲರ್ ಋಣ ತೀರಿಸಬೇಕಾಗಿ ಬಂತು. ಅದೇ ಸಮಯದಲ್ಲಿ ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿ ಸಂಘದ ಸದಸ್ಯತ್ವ ಪ್ರಾಪ್ತವಾಯಿತು. ಸಂಘದ ತೆರೆದ ಅರ್ಥ ವ್ಯವಸ್ಥೆಯ ಶರತ್ತಿಗೆ ಕೊರಿಯ ಬದ್ಧವಾಯಿತು. ವಿದೇಶಿ ಪೇಟೆಗಳಿಂದ ಭಾರಿ ಸಾಲಗಳನ್ನೆತ್ತಿ ಕೆಬಾಲ್‌ಗಳಿಗೆ ಒದಗಿ ಸಲು ಕೊರಿಯಾ ಸರ್ಕಾರ ಎಲ್ಲ ರೀತಿಯ ಉತ್ತೇಜನ ಕೊಡು ತ್ತಿತ್ತು. ಎರಡು ವರ್ಷಗಳ ಹಿಂದೆ ಕೊರಿಯಾ ಅಧ್ಯಕ್ಷನಿಗೆ ಕೆಬಾಲ್ಸ್ ಲಂಚ ಕೊಟ್ಟಿದ್ದು ಈ ಬಿಕ್ಕಟ್ಟಿನ ಮಧ್ಯೆ ಬಯಲಾಯಿತು. ಚಲಾರ್ಥ, ವೊನ್‌ನ ಕುಸಿತ ತೀವ್ರವಾಯಿತು. ಮುಳುಗುವ ಸ್ಥಿತಿ ಯಲ್ಲಿದ್ದ ಸೋಲ್ ಬ್ಯಾಂಕ್ ಹಾಗೂ ಕೊರಿಯಾ ಫಸ್ಟ್ ಬ್ಯಾಂಕ್ ಗಳನ್ನು ಸರ್ಕಾರ ವಹಿಸಿಕೊಂಡಿತು. 10 ಬ್ಯಾಂಕುಗಳು ಮುಳುಗಿ ದವು. 14 ಮುಚ್ಚಿದ ಬ್ಯಾಂಕುಗಳು ಮಾತ್ರ ಠೇವಣಿಗಳನ್ನು ಹಿಂದಿರುಗಿಸಿದುವು. 7 ಕೆಬಾಲ್ಸ್‌ಗಳು, ಥಾಯ್‌ಲ್ಯಾಂಡ್, ಮಲೇ ಷಿಯಾಗಳಲ್ಲಿ ನೂರಾರು ಕಾರ್ಖಾನೆಗಳನ್ನು ತಾತ್ಕಾಲಿಕವಾಗಿ ಮುಚ್ಚಲಾಯಿತು. ನಿರುದ್ಯೋಗ ಸಮಸ್ಯೆ ಉಲ್ಬಣಿಸಿತು. ವಿದ್ಯಾರ್ಥಿ ಸಮುದಾಯ ಹಾಗೂ ರ್‍ಯಾಡಿಕಲ್ಸ್ ಬೆಂಬಲದಿಂದ ಕೊರಿಯ ಕಾರ್ಮಿಕ ಸಂಘ ಸಮರಕ್ಕೆ ಸಿದ್ಧಮಾಡಿಕೊಂಡಿತು. ಸರ್ಕಾರ ಹಿಂಜರಿಯಿತು. ವ್ಯಾಘ್ರರಾಷ್ಟ್ರಗಳ ಮೌನವನ್ನು ಕಂಡು "ಇದೇನು ಗರ್ಜಿಸುವ ವ್ಯಾಘ್ರಗಳು ಮಿಯಾವ್ ಎಂದು ಬೆಕ್ಕು ಗಳಾಗಿವೆಯಲ್ಲಾ", "ಬೆಕ್ಕೇ ಹುಲಿಪಟ್ಟೆಯನ್ನು ಬಳಿದು ಕೊಂಡಂತಿದೆ", 'ವ್ಯಾಘ್ರ ವ್ಯಾಘ್ರವೇ ; ಇಂದಲ್ಲ ನಾಳೆ ಯಥಾ ಸ್ಥಿತಿಗೆ ಬರುವುದು' ಎಂದು ಟೀಕೆಗಳು ಬರತೊಡಗಿದವು.

ಆರ್ಥಿಕ ಹಾಗೂ ರಾಜಕೀಯ ಪರಿಸ್ಥಿತಿ ಹದಗೆಟ್ಟು, ಈ ರಾಷ್ಟ್ರ ಗಳು ವಿಶ್ವ ನೆರವನ್ನು ನಿರೀಕ್ಷಿಸಿದುವು. ಹಾಗೂ ಆಂತರಿಕವಾಗಿ ಶೀಘ್ರ ಸುಧಾರಣೆಗಳನ್ನು ಕೈಗೊಂಡವು. ಥಾಯ್‌ಲೆಂಡ್ ಸರ್ಕಾರ ಚಲಾರ್ಥ ವ್ಯವಹಾರಗಳಲ್ಲಿರುವ ನಿರ್ಬಂಧಗಳನ್ನು, ಬಂಡವಾಳ ನಿಯಂತ್ರಣೆಯನ್ನು ತೆಗೆದು ಹಾಕಿತು. ದಿವಾಳಿ ಕಾಯ್ದೆ ಯನ್ನು ಜಾರಿಗೆ ತಂದಿತು. ಋಣ ವ್ಯವಹಾರಗಳ ಪುನರ‍್ರಚನೆಗೆ ಅವಕಾಶ ಮಾಡಿಕೊಟ್ಟಿತು. ವಿಶ್ವ ಹಣಕಾಸಿನ ಸಂಸ್ಥೆಯ ನೆರವು ಖಚಿತವಾದಾಗ ಹಲವಾರು ಕ್ಷೇತ್ರ/ವಲಯಗಳಲ್ಲಿ ಅಸಮಾಧಾನ, ಅಸಹನೆ ಉಂಟಾಯಿತು. ಇದೇನು ಕೊರಿಯಾ ದೇಶವೋ ಐಎಂಎಫ್ ಸರ್ಕಾರವೋ ಎಂದು ಕುಚೋದ್ಯ, ಟೀಕೆಗಳೇ ಬಂದವು. ಸರ್ಕಾರ ಇದನ್ನು ಗಮನಿಸದೆ ಸುಧಾರಣೆಗಳನ್ನು ಯೋಜಿಸಿತು. 20 ವರ್ಷಗಳ ದೀರ್ಘಾವಧಿ ಬಾಂಡುಗಳನ್ನು ನಿಷೇಧಿಸಿತು. 5 ಮತ್ತು 10 ವರ್ಷಗಳ ಬಾಂಡ್‌ಗಳ ಮರುಕೊಳ್ಳಿಕೆ, ಐಎಂಎಫ್ ಸಲಹೆಯಂತೆ ತೆರೆದ ಅರ್ಥ ವ್ಯವಸ್ಥೆಯಲ್ಲಿ ವಿದೇಶಿಯರಿಗೆ ಶೇಕಡಾ 50ರಷ್ಟು ಅವಕಾಶ ಇತ್ಯಾದಿ. ದೇಶದ ಬ್ಯಾಂಕುಗಳೂ ಹಣಕಾಸಿನ ಸಂಸ್ಥೆಗಳು ಸಹಕರಿಸಿದವು. ಬಿಕ್ಕಟ್ಟಿನ ಪರಿಹಾರಕ್ಕಾಗಿ ಕೊರಿಯಾ ಜನತೆ ಸುಮಾರು 170 ಮಿಲಿಯನ್ ಡಾಲರ್ ಮೌಲ್ಯದ ಚಿನ್ನ ವನ್ನು ದಾನ ಮಾಡಿದೆ.

ಇಂಡೋನೇಷಿಯಾ ಬ್ಯಾಂಕುಗಳು ಠೇವಣಿದಾರರಿಗೆ ಖಾತರಿ ನೀಡಿದುವು. ಬ್ಯಾಂಕ್ ವಿಲೀನಗಳನ್ನು ಉತ್ತೇಜಿಸಲಾಯಿತು. 16 ನಷ್ಟ ಬ್ಯಾಂಕುಗಳು ಮುಚ್ಚಿದುವು. 200ಕ್ಕೂ ಹೆಚ್ಚು ಬ್ಯಾಂಕುಗಳ ಬಂಡವಾಳದ ಚೌಕಟ್ಟನ್ನು ಬಿಗಿಗೊಳಿಸಲಾಯಿತು. ತೆರೆದ ಅರ್ಥ ವ್ಯವಸ್ಥೆಯನ್ನು ಆಕರ್ಷಕವಾಗಿ ಮಾಡಲಾಯಿತು.

ಮೆಕ್ಸಿಕೋದ ಸುಧಾರಣೆಗಳು ಅದ್ಭುತ. "ನೋಡಲು ಚೆನ್ನಾಗಿ

ಇರುವ ಅರ್ಥವ್ಯವಸ್ಥೆಗೆ ಬಿಕ್ಕಟ್ಟು ಉಂಟಾದಾಗ ಶೀಘ್ರವೇ ಹಳಿ ತಪ್ಪುವುದು, ಅಷ್ಟೇ ವೇಗದಲ್ಲಿ ಯಥಾಸ್ಥಿತಿಗೆ ಬರುವುದು'' ಎಂದು ಕೇನ್ಸ್ ಮಹಾಶಯ ಒಮ್ಮೆ ಹೇಳಿದ್ದ. ಮೆಕ್ಸಿಕೋ ಸುಧಾರಣೆಗಳು ಇವನ ಸಿದ್ಧಾಂತವನ್ನು ದೂರೀಕರಿಸಿವೆ. ಅದು ಮಾಡಿದ್ದಾದರೂ ಏನು ?

1 ಸಂಸ್ಥೆಗಳ ಋಣಭಾರವನ್ನು ಸರ್ಕಾರವೇ ವಹಿಸಿಕೊಂಡಿತು.
2 ಋಣ ಪ್ರತಿಭೂತಿಕರಣ—ಸೋಡಿ ಸಹಿತವಾದ ಬಾಂಡುಗಳನ್ನು ಸ್ವೀಕರಿಸಬೇಕೆಂದು ಸಾಲಿಗರನ್ನು ಒತ್ತಾಯಿಸಿತು.
3 ಅಮೆರಿಕಾ ಸಾಲವನ್ನು ಹಂತ ಹಂತವಾಗಿ ಶೇ. 50ರಷ್ಟು ತೀರಿಸಿತು.
4 ವಿಶ್ವದ ವಿವಿಧ ಪೇಟೆಗಳಿಗೆ ಧಾವಿಸಿ ಡಾಲರ್, ಮಾರ್ಕ್, ಯೆನ್ ಮತ್ತ ಲಿರಾ ಹಣವನ್ನು ಸಂಗ್ರಹಿಸಿತು.
5 ಅಲ್ಪಾವಧಿ ಋಣ—ದೀರ್ಘಾವಧಿ ಸಾಲಗಳನ್ನು ಪರಸ್ಪರ ಚುಕ್ತಾ ಮಾಡಿತು.
6 ಮರು ಪಾವತಿಯ ಸರಾಸರಿ ಅವಧಿಯನ್ನು 3ರಿಂದ 7ವರ್ಷಗಳಿಗೆ ವಿಸ್ತರಿಸಿ ವೆಚ್ಚವನ್ನು ಕಡಿಮೆ ಮಾಡಿಕೊಂಡು ಸುಮಾರು 100 ದಶಲಕ್ಷ ಡಾಲರ್ ಉಳಿತಾಯ ಮಾಡಿತು. ಅಸಲು ಮೊತ್ತದಲ್ಲಿ ಕಡಿಮೆ ಪ್ರಮಾಣದ ಮರುಪಾವತಿಯಿಂದ ಇನ್ನೂ 1.5 ಬಿಲಿಯನ್ ಡಾಲರ್ ಉಳಿತಾಯ ವಾಯಿತು.
7 10 ವರ್ಷದ ಅವಧಿಯ 1 ಬಿಲಿಯನ್ ಡಾಲರ್ ಬಾಂಡುಗಳ ನೀಡಿಕೆಗೆ ವಿಶ್ವದ ವಿವಿಧ ಪೇಟೆಗಳಿಂದ ಒಳ್ಳೆ ಪ್ರತಿಕ್ರಿಯೆ ಬಂದಿದೆ.

ಸಿಂಗಾಪೂರ್, ಚೈನಾ ಹಾಗೂ ಜಪಾನ್ ದೇಶಗಳಲ್ಲಿ ಪರಿಣಾಮವಿಲ್ಲ. ಆದರೆ ಹಾಂಕಾಂಗ್ ವಿನಿಮಯ ದರದಲ್ಲಿ ಸ್ಥಿರತೆಗೆ ಶ್ರಮಪಡುತ್ತಿತ್ತು. ಕಳಪೆ ಬಾಂಡುಗಳ ವ್ಯವಹಾರದಿಂದ ಇಂಡೋನೇಷಿಯಾ, ಥಾಯ್‌ಲೆಂಡ್‌ಗಳಲ್ಲಿ ಕೊಟ್ಟ ಭಾರಿ ಸಾಲಗಳು ವಾಪಸಾಗಲಿಲ್ಲವಾದ್ದರಿಂದ ಪೆರಿಗ್ರೈನ್ ಸಂಸ್ಥೆ ಕುಸಿಯಿತು. ಇದರ ಜೊತೆಗೆ 'ರೆಡ್ ಚಿಪ್ಸ್'ಗಳಿಗೂ (ಚೀನಿ ಸರ್ಕಾರದ ಪಾಲುದಾರಿಕೆ ಇರುವ ಹಾಂಕಾಂಗ್‌ನ ಭಾರಿ ಉದ್ಯಮಗಳ ಶೇರುಗಳು) ಜಖಂ ಆಯಿತು. ಹ್ಯಾನ್‌ಸೆಂಗ್ ಸೂಚಿ ಇಳಿಮುಖವಾಯಿತು.

''ನಮ್ಮಲ್ಲಿ 10 ಬಿಲಿಯನ್ ಡಾಲರ್‌ಗಳಷ್ಟು ಆಸ್ತಿ ಇದೆ. 800 ಬಿಲಿಯನ್ ಡಾಲರ್ ವಿದೇಶಿ ಆಸ್ತಿ ಇದೆ. ಆದ್ದರಿಂದ ನಮ್ಮ ಮೇಲೆ ಈ ಬಿಕ್ಕಟ್ಟು ಯಾವ ಪರಿಣಾಮವನ್ನೂ ಬೀರಿಲ್ಲ. ಥಾಯ್‌ಲೆಂಡಿನಲ್ಲಿರುವ ನಮ್ಮ ಹಿತಾಸಕ್ತಿ ಸ್ಥಿರವಾಗಿಯೇ ಇದೆ. ಈ ರಾಷ್ಟ್ರಗಳಲ್ಲಿ ಬೇಡಿಕೆ ಸ್ಥಗಿತಗೊಂಡಿರುವುದರಿಂದ ನಮ್ಮ ಕಾರು ವ್ಯಾಪಾರಕ್ಕೆ ಸ್ವಲ್ಪ ತಡೆ ಉಂಟಾಗಿದೆ.'' ಇದನ್ನು ಜಪಾನ್ ಸರ್ಕಾರದ ಪ್ರತಿನಿಧಿ ದೇವೋಸ್ ಶೃಂಗಸಭೆಯಲ್ಲಿ ಸ್ಪಷ್ಟಪಡಿಸಿದರು. ಕ್ಲಿಂಟನ್ ಲೈಂಗಿಕ ವ್ಯವಹಾರದಿಂದ ಆಗ್ನೇಯ ರಾಷ್ಟ್ರಗಳ ಚಲಾರ್ಥಗಳ ಮೌಲ್ಯದಲ್ಲಿ ಸ್ವಲ್ಪ ಚೇತರಿಕೆ ಕಂಡಿತು. ಆದರೆ ಜಪಾನಿನ ಯೆನ್ ವಿರುದ್ಧ ಡಾಲರ್ ಮೌಲ್ಯ ಕೆಳಗಿಳಿಯಿತು. (ಅಮೆರಿಕದ ಡಾ. ಜೋನ್ಸ್ ಸೂಚಿಯ ಆಧಾರದ ಮೇಲೆ) ರಫ್ತು ವ್ಯಾಪಾರ ಸ್ಥಗಿತಗೊಂಡಿತು. ಆಗ್ನೇಯ ರಾಷ್ಟ್ರಗಳ ಸರಕು ಅಗ್ಗವಾಯಿತು. ಆದರೆ ಲೋಹ ವ್ಯಾಪಾರಕ್ಕೆ ಅಡ್ಡಿ ಉಂಟಾಯಿತು. ಭಾರತದ ಮೇಲೂ ಪರಿಣಾಮವಿಲ್ಲ. ಕಾರಣ :

1 ನಿಧಾನವಾದ ಮತ್ತು ಪೂರ್ವಯೋಜಿತವಾದ ಉದಾರೀಕರಣ.
2 27 ಬಿಲಿಯನ್ ಡಾಲರ್ ವಿದೇಶಿ ವಿನಿಮಯ ವಿಶಾಸಲಿದೆ. ಭಾರತದ 'ಫಾರೆಕ್ಸ್' ಪೇಟೆ ಸ್ಥಿರವಾಗಿದೆ. ಋಣ ಸೇವೆ ಸಮಾಧಾನಕರವಾಗಿದೆ.
3 ಆಂತರಿಕವಾಗಿ ಸಾಕಷ್ಟು ಹಣ ಹೂಡಿಕೆ ಇದೆ. ಇದರಿಂದ ಉಳಿತಾಯದ ಗಾತ್ರವನ್ನು ತಿಳಿಯಬಹುದು.
4 ಒಟ್ಟು ಋಣದಲ್ಲಿ ಅಲ್ಪಾವಧಿ ಹೊಣೆ ಶೇ. 16 (ಕೊರಿಯಾದಲ್ಲಿ ಶೇ. 24)
5 ಚಾಲ್ತಿ ಖಾತೆ ಕೊರತೆ ಸ್ಥೂಲ ದೇಶೀಯ ಉತ್ಪನ್ನದಲ್ಲಿ ಶೇ. 2ಕ್ಕಿಂತ ಕಡಿಮೆ.
6 ಭಾರತ ಕಡಿಮೆ ವರಮಾನ ರಾಷ್ಟ್ರವೆಂದು ವಿಶ್ವ ಉದರಿ ಮಾಪನ ಸಂಸ್ಥೆಗಳು ವರ್ಗೀಕರಿಸಿರುವುದರಿಂದ ವಿದೇಶಿ ನೆರವಿನಲ್ಲಿ ಆದ್ಯತೆ ಹಾಗೂ ರಿಯಾಯಿತಿ ಇದೆ.

ಡಾಲರ್ ಒಂದಕ್ಕೆ 40 ರೂ. ಪರಿಸ್ಥಿತಿಗೂ ಬಿಕ್ಕಟ್ಟಿಗೂ ಸಂಬಂಧವಿಲ್ಲ. ಏಕೆಂದರೆ ಇದು ಅಧಿಕೃತವಾದ ಅಪಮೌಲ್ಯವಲ್ಲ. ಸ್ಪರ್ಧಾತ್ಮಕವಾದುದೂ ಅಲ್ಲ. ಭಾರತವು ಸ್ಪರ್ಧಾತ್ಮಕವಾಗಿ ಅಪಮೌಲ್ಯ ಮಾಡುವುದು ಎಂದು ವಿದೇಶಿ ಸಾಂಸ್ಥಿಕ ಹೂಡಿಕೆದಾರರು ನಿರೀಕ್ಷಿಸಿದ್ದರು. ಆದರೆ ಹಾಗಾಗಲಿಲ್ಲವಾದ್ದರಿಂದ ಅವರು ತಮ್ಮ ಹೂಡಿಕೆಗಳನ್ನು ಭಾರತದಲ್ಲಿ ಕೇಂದ್ರೀಕರಿಸುವ ಸಾಧ್ಯತೆ ಇದೆ. ಏಷ್ಯಾ ರಾಷ್ಟ್ರಗಳಲ್ಲಿ ಅರ್ಥವ್ಯವಸ್ಥೆ ಯಥಾಸ್ಥಿತಿಗೆ ಬರಬೇಕಾದರೆ ಕನಿಷ್ಟ ಇನ್ನೂ ಒಂದು ವರ್ಷ ಬೇಕಾಗಬಹುದು. ಜವಳಿ ಹಾಗೂ ಸಿದ್ಧಪಡಿಸಿದ ಉಡುಪುಗಳಲ್ಲಿ ಎರಡೂ ಪಕ್ಷಗಳಿಗೆ ಸ್ವಲ್ಪ ಸ್ಪರ್ಧೆ ಇದೆ. ಅಲ್ಲಿಯ ಬೇಡದ ವಸ್ತುಗಳು ಇಲ್ಲಿಗೆ ಬರದಿದ್ದರೆ ಸರಿ. ಮತ್ತು ರೂಪಾಯಿಯ ಮೌಲ್ಯ ಮತ್ತೆ ಇಳಿಯಬಾರದು.

## ಉಪಸಂಹಾರ

ಖಾಸಗಿ ಕ್ಷೇತ್ರ/ಪೇಟೆಗಳಿಂದ ಬರುವ ಬಂಡವಾಳ ಅಮೂಲ್ಯವಾದುದು. ಇದನ್ನು ಸರಿಯಾಗಿ ನಿರ್ವಹಿಸದಿದ್ದರೆ ಅರ್ಥವ್ಯವಸ್ಥೆ ಕ್ರಮೇಣ ಕರಗಿದಂತೆ ಆಗುವುದು. ಚಲಾರ್ಥಗಳ ಸ್ಥಿರತೆಯನ್ನು ಕಾಪಾಡಬೇಕು. ನಿರ್ದಿಷ್ಟವಾದ ವಿನಿಮಯ ದರ ಸಲ್ಲದು. ಚಾಲ್ತಿ ಖಾತೆ ಕೊರತೆ ಮಿತಿ ಮೀರಬಾರದು. ವಿದೇಶಿ ಹಣವನ್ನು ಆಂತರಿಕವಾಗಿ ಮರು ಸಾಲವಾಗಿ ಕೊಡಬಾರದು. ಒಳ್ಳೆಯ ಸಂವಹನೆಯ ವ್ಯವಸ್ಥೆ ಅತ್ಯಗತ್ಯ. ಲೆಕ್ಕ ಹಾಗೂ ಲೆಕ್ಕ ಪರಿಶೋಧನೆಯಲ್ಲಿ ವಿಶ್ವ ಮಾನಕಗಳನ್ನು ಅಳವಡಿಸಬೇಕು. ಇವೇ ವ್ಯಾಘ್ರ ರಾಷ್ಟ್ರಗಳ ಬಿಕ್ಕಟ್ಟಿನಿಂದ ಬಂದ ಪಾಠ.

## ಬಿಕ್ಕಟ್ಟು ಎಷ್ಟು?

(ಮೊತ್ತ ಬಿಲಿಯನ್ ಡಾಲರ್‌ಗಳಲ್ಲಿ)  (ಡಿಸೆಂಬರ್ 1997ರಂದು ಇದ್ದಂತೆ (ಮೆಕ್ಸಿಕೊ ಹೊರತಾಗಿದೆ)

| ದೇಶದ ಹೆಸರು | ವಿದೇಶಿ ವಿನಿಮಯ ಮೀಸಲು | ದೇಶ ವಿದೇಶ ಋಣ (ಬ್ಯಾಂಕ್ ಸಾಲಗಳು ಸೇರಿ) | ಚಲಾರ್ಥದ ಹೆಸರು/ಶೇರು ಸೂಚಿಯ ಹೆಸರು ಸೂಚಿಯ ಆಧಾರದಿಂದ ಕುಸಿತ ಎಷ್ಟು? (ಶೇ) | ವಿಶ್ವಹಣಕಾಸು ಸಂಸ್ಥೆಯ ನೆರವು ಟ್ರಾನ್ಸ್ ಮೂಲಕ |
|---|---|---|---|---|
| 1 ಮೆಕ್ಸಿಕೊ | 07 (ಡಿ. 94) | 31 | ಪೆಸೊ : ಬೋಲ್‌ಸೊ 35 | 21 (ವಿಶ್ವಬ್ಯಾಂಕ್ ಅಮೇರಿಕಾ ನೆರವು ಸೇರಿದೆ. |
| 2 ಥಾಯ್‌ಲ್ಯಂಡ್ | 24 (ಡಿ. 97) 90 | 90 | ಬಾಹ್ಟ್ : ಸೆಟ್ 45 | 172 (ಜಪಾನ್ ನೆರವು ಸೇರಿದೆ) |
| 3 ಇಂಡೋನೇಷಿಯ | 15 | 140 (ಅಲ್ಪಾವಧಿ 73 ಖಾಸಗಿ 65) | ರುಪೈಯ : ಜೆಸಿಐ 35–6 | 43 (ಹಾಲೆಂಡ್ ಸ್ವೀಡನ್ ಸೇರಿದೆ) |
| 4 ದಕ್ಷಿಣ ಕೊರಿಯ | 22 | 100 (ಅಲ್ಪಾವಧಿ 24) | ವೊನ್ 50 | 57 ವಿಶ್ವಬ್ಯಾಂಕ್ ಹಾಗು 13 ರಾಷ್ಟ್ರಗಳ ನೆರವು ಸೇರಿದೆ |
| 5 ಹಾಂಕಾಂಗ್ | 88 | — | ಹೆಚ್‌ಕೆ ಡಾಲರ್‌ಹ್ಯಾನ್‌ಸೆಂಗ್ 9ರಿಂದ 15 | — |
| 6 ಜಪಾನ್ | 230 | — | ಯೆನ್ : ನಿಕ್ಕಿ ಲೆಕ್ಕಕ್ಕಿಲ್ಲ | — |
| 7 ಚೈನ | ತಿಳಿದಿಲ್ಲ | — | ಯುವಾನ್ ಅಪಮೌಲ್ಯ ಇಲ್ಲ | — |
| 8 ಮಲೇಷಿಯಾ | ತಿಳಿದಿಲ್ಲ | — | ರಿಂಗಿಟ್ ಎಂಕೆಐ 40 | ತಿಳಿದಿಲ್ಲ |

★

# ಉದ್ಯಮ ಸಂಪನ್ಮೂಲ ಯೋಜನೆ

(7ನೇ ಪುಟದಿಂದ ಮುಂದುವರಿದಿದೆ)

ಬ್ಯಾಂಕು ಬಡ್ಡಿ ದರ ನಷ್ಟಸಂಭಾವ್ಯತೆಗೆ ಒಳಗಾಗಿರುವುದನ್ನು ನೀವು ಗಮನಿಸಬಹುದು. ಒಂದು ವೇಳೆ ಬಡ್ಡಿ ದರಗಳು ಮಾರುಕಟ್ಟೆನೀತಿಗೆ ಅನುಸಾರವಾಗಿ ಏರಿದರೆ ಅದು ಬ್ಯಾಂಕಿನ ನಿವ್ವಳ ಬಡ್ಡಿ ಆದಾಯದ ಮೇಲೆ ಪ್ರತಿಕೂಲ ಪರಿಣಾಮವನ್ನುಂಟುಮಾಡು ವುದನ್ನು ನೀವು ಊಹಿಸಬಹುದು. ಈ ನಷ್ಟಸಂಭಾವ್ಯತೆಯನ್ನು ಕಡಿಮೆ ಮಾಡಿಕೊಳ್ಳಲು ಬ್ಯಾಂಕು ಈ ವಿಧಾನಗಳನ್ನು ಅನುಸರಿಸ ಬಹುದು :

- ಅ ಆಸ್ತಿಗಳ ಸರಾಸರಿ ಪಕ್ವತೆಯನ್ನು ಕಡಿಮೆಮಾಡಿಕೊಳ್ಳ ಬಹುದು(ಪ್ರಾಯಶಃ ಸರ್ಕಾರಿ ಪ್ರತಿಭೂತಿಗಳ ಮೇಲಿರುವ ತನ್ನ ಹಿಡಿತವನ್ನು ಕಡಿಮೆ ಮಾಡಿಕೊಳ್ಳುವುದರ ಮೂಲಕ).
- ಆ ತನ್ನ ಹೊಣೆಗಳ ಸರಾಸರಿ ಪಕ್ವತೆಯನ್ನು ಕಡಿಮೆ ಮಾಡಿ ಕೊಳ್ಳಬಹುದು. (ಪ್ರಾಯಶಃ ಕರೆ ಹಣ ಮಾರುಕಟ್ಟೆಯ ಮೇಲೆ ಅವಲಂಬಿತವಾಗುವುದನ್ನು ಕಡಿಮೆ ಮಾಡಿಕೊಳ್ಳು ವುದರ ಮೂಲಕ).

ಬ್ಯಾಂಕಿನ ಒಟ್ಟು ನಷ್ಟಸಂಭಾವ್ಯತೆಯ ನಿಖರವಾದ ಮಾಹಿತಿ ನಿಮಗೆ ಲಭ್ಯವಾಗಿರುವುದರಿಂದ ನಿಮ್ಮ ಶಾಖೆಗಳಲ್ಲಿ (ಭವಿತವ್ಯದ ನಷ್ಟಸಂಭಾವ್ಯತೆಯನ್ನು ಕಡಿಮೆಗೊಳಿಸಲು) ದೀರ್ಘಾವಧಿ ಠೇವಣಿಗಳನ್ನು ಪ್ರೋತ್ಸಾಹಿಸುವ ತೀರ್ಮಾನವನ್ನು ನೀವು ತೆಗೆದು ಕೊಳ್ಳಬಹುದು. ಬಡ್ಡಿದರವನ್ನು ಕೂಡ ಈ ಆಧಾರದ ಮೇಲೆಯೇ ನಿರ್ಧರಿಸಬಹುದು. ಬ್ಯಾಂಕಿನ ಶಾಖೆಗಳು ಎಲ್ಲೇ ಇದ್ದರೂ ಒಟ್ಟು ಬ್ಯಾಂಕಿನ ಆಸ್ತಿ-ಹೊಣೆಗಳ ಸ್ವರೂಪ ತಿಳಿದಿರುವುದರಿಂದ ಸರಿಯಾದ ತೀರ್ಮಾನ ತೆಗೆದುಕೊಳ್ಳುವುದು ಸುಲಭ.

ಮೇಲೆ ಹೇಳಿದ ಉದಾಹರಣೆ ಮಾಹಿತಿಯ ಪ್ರಾಮುಖ್ಯ ವನ್ನು ಮತ್ತು ಮಾಹಿತಿಯನ್ನಾಧರಿಸಿ ಸರಿಯಾದ ವ್ಯವಹಾರ ತೀರ್ಮಾನಗಳನ್ನು ಹೇಗೆ ತೆಗೆದುಕೊಳ್ಳಬಹುದೆಂಬುದನ್ನು ತಿಳಿಸು ತ್ತದೆ. ಬ್ಯಾಂಕಿಂಗ್ ಉದ್ಯಮದಲ್ಲಿ ಇಂತಹ ಅನೇಕ ತೀರ್ಮಾನ ಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಜಟಿಲತೆಯಿಂದ ಕೂಡಿದ ಬ್ಯಾಂಕಿಂಗ್ ಉದ್ಯಮದಲ್ಲಿ ಬಡ್ಡಿ ದರದ ನಷ್ಟಸಂಭಾವ್ಯತೆ ಬಗ್ಗೆ ಮಾಹಿತಿ, ಅನೇಕ ಮಾಹಿತಿಗಳಲ್ಲಿ ಒಂದು ಅಂಶವಷ್ಟೇ. ಬ್ಯಾಂಕಿಗೆ ಸವಾಲೊಡ್ಡುವ ಮೂರು ಮುಖ್ಯ ನಷ್ಟಸಂಭಾವ್ಯತೆಗಳೆಂದರೆ—

ಅ. ಉದರಿ ಸಂಬಂಧಿ, ಆ. ಮಾರುಕಟ್ಟೆ ಸಂಬಂಧಿ, ಇ. ವಹಿವಾಟು ಸಂಬಂಧಿ.

ಉದ್ಯಮ ಸಂಪನ್ಮೂಲ ಯೋಜನೆಯ ಅನುಷ್ಠಾನದಿಂದ ಈ ನಷ್ಟಸಂಭಾವ್ಯತೆಗಳ ಕುರಿತ ಸ್ಪಷ್ಟ ಮಾಹಿತಿಯ ಹಿನ್ನೆಲೆಯಲ್ಲಿ ಬ್ಯಾಂಕು ಸೂಕ್ತ ಕಾರ್ಯಯೋಜನೆಗಳನ್ನು ರೂಪಿಸಿಕೊಳ್ಳಲು ಅನುವಾಗುತ್ತದೆ.

ಉದ್ಯಮ ಸಂಪನ್ಮೂಲ ಯೋಜನೆ ಇಡೀ ಉದ್ಯಮದ ವ್ಯವ ಸ್ಥಾಪನೆಗೆ ಇರುವ ಸರಳ, ಸ್ಪಷ್ಟ ಹಾಗೂ ಕ್ರಿಯಾತ್ಮಕವಾದ ಒಂದು ಸಂರಚನೆಯಾದ್ದರಿಂದ ಜಟಿಲವಾದ ಬ್ಯಾಂಕಿಂಗ್ ಉದ್ಯಮ ವನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸಲು ದಾರಿದೀಪವಾಗ ಬಲ್ಲದು. ★

